# ಮೈಸೂರು ವಿಶ್ವವಿದ್ಯಾನಿಲಯ
# ಪ್ರಚಾರ ಪುಸ್ತಕಮಾಲೆ

೧. ಖಗೋಳಶಾಸ್ತ್ರ ಪ್ರವೇಶ
—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್
೩. ತೆರಿಗೆ—ಬಿ. ಆರ್. ಸುಬ್ಬರಾವ್
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ
೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್
೧೦. ಪಂಪ—ತೀ. ನಂ. ಶ್ರೀಕಂಠಯ್ಯ
೧೧. ಪ್ರಾಣಿಜೀವನ—ಎ. ನಾರಾಯಣರಾವ್
೧೨. ಕನಸುಗಳು—ಡಾ॥ ಎನ್. ಎಸ್. ನಾರಾಯಣಶಾಸ್ತ್ರೀ
೧೩. ಮದುವೆ—ನಾ. ಕಸ್ತೂರಿ
೧೪. *ನಮ್ಮ ಆರ್ಥಿಕದೃಷ್ಟಿ—ಎಸ್. ಗೋಪಾಲಸ್ವಾಮಿ
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್
೧೬. ಬೆಳಕು—ಟಿ. ಎಸ್. ಸುಬ್ಬರಾಯ
೧೭. ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ
೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್
೨೦. ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ
೨೧. ಸಾರ್ವಜನಿಕ ವೆಚ್ಚ—ಡಾ॥ ಎಂ. ಎಚ್. ಗೋಪಾಲ್
೨೨. ಶಿಶುವಿಹಾರಗಳು—ಸಿ. ರಂಗಾಚಾರ್
೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರೀ
೨೪. ವಿಡಂಬನ—ಎಸ್. ವಿ. ರಂಗಣ್ಣ
೨೫. ಎಲ್ಲೋರ ಮತ್ತು ಅಜಂತ—ಡಾ॥ ಎಂ. ಎಚ್. ಕೃಷ್ಣ

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರ ಪುಸ್ತಕಮಾಲೆ—೮೪

# ಷಡಕ್ಷರದೇವ

ದೇ. ಜವರೇಗೌಡ, ಎಂ.ಎ.,




ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

೧೯೫೯

ಮೊದಲನೆಯ ಮುದ್ರಣ ೧೯೫೯
೩೦೦೦ ಪ್ರತಿಗಳು



ಬೆಲೆ
ಸಾದಾ ಪ್ರತಿ ೨೫ ನಯೆ ಪೈಸೆ
ಉತ್ತಮ ಪ್ರತಿ ೩೭ ನಯೆ ಪೈಸೆ

ಮುದ್ರಕರು :
ಮೈಸೂರು ಯೂನಿವರ್ಸಿಟಿ ಮುದ್ರಣಾಲಯ,
ವಿ. ವಿ. ಮೊಹಲ್ಲ, ಮೈಸೂರು

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಈ ಅವಧಿಯಲ್ಲಿ ೮೪ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರುಹೊತ್ತಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೊ ತ್ರಿಗುಣವೊ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನೂ ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ. ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. "ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ?" ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮ ಗುರಿಯಲ್ಲ; ಜ್ಞಾನ ಸಂಪಾದನೆಯೇ ಅದರ ಪರಮ ಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯದಂಥ ಸಂಸ್ಥೆಗಳ ಆದ್ಯಕರ್ತವ್ಯ. ಈ ಮೂಲಕ ವಿಶ್ವ

ವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗೆಲ್ಲ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೆ ಕನ್ನಡ ದಲ್ಲಿ ವಿಜ್ಞಾನ ಸಂಬಂಧವಾದ ವಿಷಯಗಳನ್ನು ಸುಲಭವಾಗಿ ಸರಳವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕ ಭಾಷೆ ಯಾಗಬಲ್ಲುದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಕೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯ ಮೂಡದಿರದು. ಇವುಗಳಲ್ಲಿ ೫೫ ಪುಸ್ತಿಕೆಗಳು ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ಸಮಾಜ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಇತಿಹಾಸ ಮೊದಲಾದುವುಗಳಿಗೆ ಸಂಬಂಧಿಸಿದವು. ಉಳಿದ ೨೪ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದುವು. ಇವುಗಳ ಗ್ರಂಥಕರ್ತರು ಪ್ರಮುಖವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನ ವಿದ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ, ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣಮಾಧ್ಯಮವಾಗುವ ಶಕ್ತಿ ಯನ್ನು ಪಡೆದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರಗೊಂಡು ಪುಸ್ತಕಗಳ ಸಂಖ್ಯೆ ದಿನೇ ದಿನೇ ಬೆಳೆಯಬೇಕೆಂದೂ, ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿ

ಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳಬೇಕೆಂಬುದೂ ವಿಶ್ವವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶಕಮುಹೂರ್ತದಲ್ಲಿ ಕನ್ನಡನುಡಿ ಆಡಳಿತದ ಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿವಿಕಾಸಸಾಧನದ ಭಾಷೆಯಾಗಿ ಮುಂದುವರಿಯು ವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಸೇವೆ ಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು
೫—೧—೫೯

ಕೆ. ವಿ. ಪುಟ್ಟಪ್ಪ
ವೈಸ್-ಛಾನ್ಸಲರ್.

# ಅರಿಕೆ

೧೯೫೭ರ ಜನವರಿ ತಿಂಗಳಲ್ಲಿ ಮೈಸೂರು ವಿಶ್ವವಿದ್ಯಾ ನಿಲಯದ ಪ್ರಚಾರೋಪನ್ಯಾಸಶಾಖೆ ಶಿವಮೊಗ್ಗ ಜಿಲ್ಲೆಯ ಜೋಗ್‌ನಲ್ಲಿ ಉಪನ್ಯಾಸ ಮಾಲೆಯನ್ನು ಏರ್ಪಡಿಸಿತ್ತು. ಆಗ ನಾನು ಷಡಕ್ಷರದೇವ ಮತ್ತು ಅವನ ಕಾವ್ಯಗಳನ್ನು ಕುರಿತು ಮಾತಾಡಿದ್ದೆ. ಆ ಭಾಷಣವನ್ನು ಬರೆದು ಪ್ರಚಾರ ಪುಸ್ತಕಮಾಲೆಯಲ್ಲಿ ಪ್ರಕಟಿಸಬೇಕೆಂಬ ಉದ್ದೇಶವಿತ್ತು. ಆದರೆ ಕಾರಣಾಂತರಗಳಿಂದ ಆ ಉದ್ದೇಶ ಇಂದಿನ ತನಕ ಕೈಗೂಡಿರಲಿಲ್ಲ.

ಈ ಪುಸ್ತಿಕೆಯ ಕರಡು ಸಿದ್ಧವಾದುದು ಪುಣೆಯಲ್ಲಿ. ಇಲ್ಲಿ ಬೇಕಾದ ಕನ್ನಡ ಗ್ರಂಥಗಳು ಸಿಗುವುದಿಲ್ಲ. ಮೈಸೂರಿನಲ್ಲಿ ದ್ದಾಗ ಗುರುತು ಹಾಕಿಕೊಂಡಿದ್ದ ಟಿಪ್ಪಣಿಗಳ ಆಧಾರದಮೇಲೆ ಈ ಸಣ್ಣ ಪುಸ್ತಕವನ್ನು ಬರೆದಿದೆ. ಇಲ್ಲಿ ಏನಾದರೂ ನ್ಯೂನತೆ ಗಳು ಉಳಿದಿದ್ದರೆ ವಾಚಕರು ಕ್ಷಮಿಸಬೇಕಾಗಿ ಪ್ರಾರ್ಥನೆ.

ಈ ಪುಸ್ತಿಕೆಯನ್ನು ಪ್ರಕಟಿಸಲು ಒಪ್ಪಿಕೊಂಡುದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೂ, ಪ್ರಕಟಣ ಮತ್ತು ಪ್ರಚಾರಶಾಖೆಯ ಅಧಿಕಾರಿಗಳಿಗೂ ಕೃತಜ್ಞನಾಗಿದ್ದೇನೆ.

ಡೆಕ್ಕನ್ ಕಾಲೇಜು, ಪೂನಾ.
೧—೨—೧೯೫೯

**ದೇ. ಜವರೇಗೌಡ**

## ಪರಿವಿಡಿ

# ಷಡಕ್ಷರದೇವ

## ೧ ಪೀಠಿಕೆ

ಮಾನವನ ಬಾಳು ಸಾಮಾನ್ಯವಾಗಿ ಎರಡು ಭೂಮಿಕೆಗಳಲ್ಲಿ ವ್ಯವಹರಿಸುತ್ತದೆ: ಒಂದು ಅಂತರಂಗ ಭೂಮಿಕೆ, ಮತ್ತೊಂದು ಬಹಿರಂಗ ಭೂಮಿಕೆ. ಜೀವನದ ಶ್ರೇಯಸ್ಸಿಗೆ ಎರಡರ ಪ್ರಗತಿ ಮತ್ತು ಸಾಮರಸ್ಯ ಅತ್ಯಾವಶ್ಯಕ. ಆದುದರಿಂದ ಜನಜೀವನದ ಪ್ರತಿಬಿಂಬವಾದ ಸಾಹಿತ್ಯದಲ್ಲಿ ಈ ಎರಡು ಮುಖಗಳನ್ನೂ ಕಾಣಬಹುದು. ಕನ್ನಡ ಸಾಹಿತ್ಯದಲ್ಲಂತು ಅಂತರ್ಮುಖ ಜೀವನದ ವ್ಯಾಪ್ತಿಯನ್ನೆ ವಿಶೇಷವಾಗಿ ಗುರುತಿಸ ಬಹುದು. ಕೀರ್ತಿ, ಧನ, ಲೋಕವ್ಯವಹಾರ ಜ್ಞಾನ, ಅಮಂಗಳ ಪರಿಹಾರ, ಪರಮಾನಂದ, ಕಾಂತಾಸಮ್ಮಿತದಿಂದ ಉಪದೇಶ ಇವುಗಳ ಸಾಧನೆ ಮತ್ತು ಸಂಪಾದನೆ ಕನ್ನಡ ಸಾಹಿತ್ಯದ ಗುರಿ ಮತ್ತು ಉದ್ದೇಶ. ಕಾವ್ಯಧರ್ಮ ಮತ್ತು ಧರ್ಮ ಇವೆರಡೂ ಹಾಸುಹೊಕ್ಕಾಗಿ ಸೇರಿ, ಸಮರಸವಾಗಿ ಬೆರೆತು ಕನ್ನಡ ಸಾಹಿತ್ಯದ ಸ್ಫೂರ್ತಿಶಕ್ತಿಯಾದುವು.

ಎಲ್ಲ ಯುಗದ ಕನ್ನಡ ಸಾಹಿತ್ಯದಲ್ಲಿ ಈ ಗುಣ ಲಕ್ಷಣಗಳು ಪ್ರಧಾನವಾಗಿ ಮತ್ತು ಅನಿವಾರ್ಯವಾಗಿ ಗೋಚರಿಸಿದರೂ, ಪ್ರತಿಯೊಬ್ಬ ಕವಿಯ ಕಾವ್ಯದಲ್ಲಿಯೂ ವೈಯಕ್ತಿಕ ಸಂಸ್ಕಾರಾಭಿರುಚಿಜನ್ಯವಾದ ವೈಲಕ್ಷಣ್ಯಗಳು ಇದ್ದೇ ಇರುತ್ತವೆ. ಮೊದಮೊದಲು ರೀತಿ ಶೈಲಿ ಮತ್ತು ವಸ್ತು ನಿರೂಪಣೆಯಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತ ಸಾಹಿತ್ಯದ ಜಾಡನ್ನು ಹಿಡಿದರೂ, ಕೊನೆಕೊನೆಗೆ ತನ್ನತನವನ್ನರಿತುಕೊಂಡು ಹಳೆಯ ಮಾರ್ಗ

ವನ್ನು ತ್ಯಜಿಸಿತು. ರಾಜಾಸ್ಥಾನದಲ್ಲಿ ಚಂಪೂಗದ್ದುಗೆಯನ್ನೇರಿ ಮೆರೆದ ಸಾಹಿತ್ಯ ಕೊನೆಕೊನೆಗೆ ಸಾಮಾನ್ಯ ಜನತೆಯ ಹೃದಯಾಂತರಾಳವನ್ನು ಪ್ರವೇಶಿಸಿ ಬೆಳಗಿತು. ಮತ್ತೆ ಹದಿನೇಳನೆಯ ಶತಮಾನದಲ್ಲಿ ರಾಜಾಶ್ರಯ ದೊರೆತೊಡನೆ ಅದು ಚಂಪೂ ಗದ್ದುಗೆಯನ್ನೇರಿತು. ಅದೇ ಕಾಲದಲ್ಲಿದ್ದ ಷಡಕ್ಷರದೇವ ತಾನು ಹರಿಹರನ 'ಉದಿತಮಾರ್ಗ' ದಿಂದ ತನ್ನ ಕಾವ್ಯವನ್ನು ರಚಿಸುವುದಾಗಿ ಹೇಳಿದ್ದರೂ, ಪೂರ್ವಸಂಪ್ರದಾಯದ ಚಂಪೂಶೈಲಿಗೆ ಮಾರುಹೋದನು. ಇದಕ್ಕೆ ಆಗಿನ ಕಾಲದ ಪರಿಸ್ಥಿತಿ ಮಾತ್ರವಲ್ಲದೆ, ಶಿವಲೀಲಾ ಮಹಿಮೆಯನ್ನು ಮತ್ತು ಶರಣರ ಭಕ್ತಿವಿಲಾಸವನ್ನು ರಾಜಗಾಂಭೀರ್ಯದ ಚಂಪೂಶೈಲಿಯಲ್ಲಿ ವರ್ಣಿಸುವುದೇ ಸೂಕ್ತವೆಂದು ಅವನು ಭಾವಿಸಿರಬಹುದು.

## ೨ ಕವಿಕಾವ್ಯ ವಿಚಾರ

ಮಳವಳ್ಳಿ ತಾಲ್ಲೂಕಿನ ದನುಗೂರು ಷಡಕ್ಷರದೇವನ ಜನ್ಮಸ್ಥಳ. ಚಿಕ್ಕದೇವರಾಜನ ತಾಯಿಯಾದ ಎಳವಂದೂರು ಅಮೃತಾಂಬೆಯ ತವರುಮನೆಗೆ ಗುರುವಾದ ಆರಾಧ್ಯರ ಮಗ; ಸಂಸ್ಕೃತ ಕನ್ನಡ ಭಾಷಾಸಾಹಿತ್ಯಗಳಲ್ಲಿ ಅವನು ಗಳಿಸಿದ್ದ ಅಪಾರವಾದ ಪಾಂಡಿತ್ಯದಿಂದ, ಕಲ್ಪನಾಚಾತುರ್ಯ ಪ್ರತಿಭಾಶಕ್ತಿ ಮತ್ತು ರಸಿಕತೆಗೆ ಒರೆಗಲ್ಲಾಗಿದ್ದ ಅವನ ಕಾವ್ಯಗಳಿಂದ ರಾಜಗೌರವಕ್ಕೆ ಪಾತ್ರನಾಗಿ ಮಠಮಾನ್ಯಗಳನ್ನು ಪಡೆದಿದ್ದನು. ದನುಗೂರು ಮಠದ ಸ್ವಾಮಿಯಾಗಿದ್ದ ರೇವಣಸಿದ್ಧನ ಶಿಷ್ಯ ಚಿಕವೀರದೇಶಿಕ, ಅವನ ಕರಸಂಜಾತ ತಾನು ಎಂದು ಕವಿಯೇ ಹೇಳಿಕೊಂಡಿದ್ದಾನೆ. ಅರಮನೆಯ ಆಹ್ವಾನವನ್ನು ಮನ್ನಿಸಿ

ಯಳಂದೂರಿಗೆ ಬಂದು ಆ ಮಠದ ಸ್ವಾಮಿಯಾಗಿ ಅಲ್ಲಿಯೇ ಸಮಾಧಿಯನ್ನು ಪಡೆದನು.

ಷಡಕ್ಷರಿಯ ಜನ್ಮದಿನವಾಗಲಿ ಶಿವೈಕ್ಯನಾದ ದಿನವಾಗಲಿ ತಿಳಿದಿಲ್ಲ. ರಾಜಶೇಖರವಿಳಾಸ ಶಾಲಿವಾಹನ ಶಕ ೧೫೭೭ ನೆಯ ಜಯಸಂವತ್ಸರ ಮಾಘ ಶುದ್ಧ ಶುಕ್ಲಪಕ್ಷ ತೃತೀಯಾ ಬುಧವಾರ ಅಂದರೆ ಕ್ರಿ. ಶ. ೧೬೫೫ರಲ್ಲಿಯೂ, ವೃಷಭೇಂದ್ರ ವಿಜಯ ಶಾಲಿವಾಹನ ಶಕ ೧೫೯೮ನೆಯ ನಳ ಸಂವತ್ಸರದ ಮಾಘಮಾಸದ ಸಿತಪಕ್ಷ ಪಂಚಮಿ ಗುರುವಾರ ಅಂದರೆ ಕ್ರಿ. ಶ. ೧೬೭೭ ರಲ್ಲಿಯೂ ಪೂರ್ಣಗೊಂಡುದಾಗಿ ಕವಿಯ ಮಾತಿನಿಂದಲೆ ವ್ಯಕ್ತವಾಗುತ್ತದೆ. ಅವನು ರಾಜಶೇಖರ ವಿಳಾಸವನ್ನು ರಚಿಸುತ್ತಿದ್ದ ಕಾಲದಲ್ಲಿ ಹದಿನಾಡು ಪ್ರಾಂತ ವನ್ನು ಮುದ್ದುರಾಜ ಆಳುತ್ತಿದ್ದುದಾಗಿ ಎಳಂದೂರಿನ ಗೌರೀಶ್ವರಾಲಯದ (ಶಾಲಿವಾಹನ ಶಕ ವರ್ಷ ೧೫೭೭) ಶಾಸನದಿಂದ ತಿಳಿದುಬರುತ್ತದೆ. ಆದುದರಿಂದ ಕವಿ ಹದಿನೇಳ ನೆಯ ಶತಮಾನದ ಉತ್ತರಾರ್ಧದಲ್ಲಿ (ಸು. ೧೬೫೦) ಜೀವಿಸಿದ್ದ ನೆಂದು ಹೇಳಬಹುದು.

ಕವಿ ರಾಜಗೌರವಕ್ಕೆ ಪಾತ್ರನಾಗಿದ್ದ ಮಾತ್ರದಿಂದ ಅವನು ರಾಜಾಶ್ರಯದಲ್ಲಿದ್ದನೆಂದು ಹೇಳಲಾಗುವುದಿಲ್ಲ. ಹರಿಹರಾದಿ ಪ್ರಾಚೀನ ವೀರಶೈವ ಕವಿಗಳ ಪಂಥಾನುಯಾಯಿಯಾದ ಇವನು ಯಾವ ಮಾನವನನ್ನೂ ಇಂದ್ರ ಚಂದ್ರನೆಂದು ಸ್ತುತಿಸುವುದಿಲ್ಲ.

ಧರೆಯೊಳ್ಮೇಣ್ಪುಟ್ಟ ಪುಟ್ಟುತ್ತಿರುಳ್ಳ ನರರ ಮೇಲುಬ್ಬಿ ಕಬ್ಬಂಗಳಂ ಬಿ
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ಕೆಟ್ಟು ಪೋದರ್

ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ
ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾರ್ಸಾಟಿಯಪ್ಪರ್

ರಸೆಯೊಳ್ ರಸವತ್ ಕವಿತೆಯ
ನುಸಿರಲ್ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸಮನಾಂತವೊಲಕ್ಕುಂ

ಶಿವನನ್ನೂ ಅವನ ಶರಣರನ್ನೂ ಹೊಗಳುವುದೇ ಶ್ರೇಯಸ್ಕರವೆಂದು ಭಾವಿಸಿದ ಮತ್ತು ಅವರಿಗೆ ಮಾತ್ರ ತನ್ನ ಜಿಹ್ವೆಯನ್ನು ಮಾರಿದ್ದೇನೆಂದು ಶಪಥ ತೊಟ್ಟ ಷಡಕ್ಷರಿ ಯಾವ ಮನುಷ್ಯನನ್ನೂ ಹೊಗಳಲಾರ.

ತನ್ನ ಎಲ್ಲ ಕೃತಿಗಳ ಪ್ರಾರಂಭದಲ್ಲಿ ಕವಿ ಉತ್ತಮ ಕಾವ್ಯದ ಲಕ್ಷಣಗಳನ್ನು ತಿಳಿಸಿ, ತನ್ನ ಕೃತಿಗಳು ಆ ಲಕ್ಷಣಗಳನ್ನೊಳಗೊಂಡಿವೆಯೆಂದು ತಿಳಿಸುತ್ತಾನೆ. ನಲ್ನುಡಿ ಅಮರ್ದಿನಂತೆ ಕಿವಿಗೆ ಒಡಂಬಡಬೇಕು ; ಬಂಧ ದೇಶಿಯಿಂದ ಕೂಡಿರಬೇಕು ; ಸೊಂಪು ಸುಳಿದಾಡಿ ರಸ ನವೀನ ರೀತಿಯಲ್ಲಿ ತುಂಬಿ ಬಂದು, ಭಾವ ಸಹೃದಯರ ಮನಸ್ಸನ್ನು ನೇರವಾಗಿ ಪ್ರವೇಶಿಸಬೇಕು. ಸತ್ಕವಿಯಾದವನು ಹೀಗೆ ಸ್ಫೂರ್ತಿಯಿಂದ ಕಾವ್ಯವನ್ನು ರಚಿಸಬೇಕು. ನವರಸ ಸಹೃದಯರ ತನುಮನವನ್ನೆಲ್ಲ ತುಂಬಿ, ಪ್ರತಿಭಾ ವಿದ್ಯುತ್ ಸಂಚಾರವಾಗಿ, ಸುಖಬಾಷ್ಪ ತುಳುಕುವಂತೆ ಕಾವ್ಯವನ್ನು ಹೇಳಬೇಕು. ಅಲಂಕಾರರಹಿತವೂ, ಶಿಥಿಲಶೈಲಿಯುಕ್ತವೂ, ದೋಷವ್ರಜಾಕುಲೆಯೂ, ರಸವೃತ್ತಿವಿಹೀನವೂ, ದುರ್ಬಲವೂ ಆದ ಕವಿತೆ ಸಹೃದಯ ಮನೋರಂಜನೀಯವಾಗಲಾರದು. ಸರ್ವಾಂಗ ಸುಂದರವಾದ ರಸವತ್ಕವಿತೆ ಎಲ್ಲರಿಗೂ ದಕ್ಕುವ ವಸ್ತುವಲ್ಲ; ಸಂತೆಯಲ್ಲಿ

ಮಾರಾಟವಾಗುವ ದಿನಸಿಯಲ್ಲ. ಅದು ಕಲಿಸಿದರೆ ಬರುವುದಿಲ್ಲ. ಸಲ್ಲಲಿತವೂ ನಿಸರ್ಗಸುಭಗವೂ ರಮಣೀಯವೂ ಆದ ಕವಿತೆ ಪ್ರತಿಭಾದರ್ಶನಕ್ಕೆ ಮಾತ್ರ ಗೋಚರಳು. ಶಾಸ್ತ್ರಗಳನ್ನೆಲ್ಲ ಓದಿ ಹೃದ್ಗತಮಾಡಿಕೊಂಡರೂ ಕವಿತೆ ಸುಲಭಲಭ್ಯಳಾಗಳು. ಅದಕ್ಕೆ ಮಾರಾರಿಯ ಕೃಪೆ ಬೇಕು.

> ಆರಾರೇರಶಾಸ್ತ್ರ
> ಶ್ರೀರೋಹಣಗಿರಿಯನಲ್ಲಿ ನವಕವಿತಾ ಚಿಂ
> ತಾರತ್ನಂ ದೊರೆಗುಮೆ ಮಾ
> ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್
>
> ಕಲಿಸಿದೊಡೇಂ ಬರ್ಕ್ಕುಮೆ ಸ
> ಲ್ಲಲಿತ ಕವಿತ್ವಂ ನಿಸರ್ಗಸುಭಗಂ ರಮಣೀ
> ವಿಲಸಿತ ರತಿರಸ ರಸಿಕತೆ
> ತಲೆದೋರ್ಪುದು ತಾನೆ ಕಲಿಸಲೇಂ ಬಂದಪುದೇ

ಅನಂತರ ಕವಿ ಕುಕವಿಗಳನ್ನೂ ಮಾತ್ಸರ್ಯಗ್ರಸ್ತರಾದ ನಿಂದಕರನ್ನೂ ಭಂಗಿಸುತ್ತಾನೆ. ರಸಸಮೃದ್ಧವಾದ ಕಾವ್ಯ ಕುಕವಿಗಳಿಗೆ ಹಿಡಿಸುವುದಿಲ್ಲ; ಸತ್ಕೃತಿಯಲ್ಲಿ ದೋಷವನ್ನರಸಿ ಕಾಣದೆ ಅವನು ಮರುಗಿ ಕೊರಗುತ್ತಾನೆ. ಜ್ವರದಿಂದ ನರಳುವವನು ಅಮೃತವನ್ನು, ಗೂಬೆ ಅನಂತರತ್ನರುಚಿಯನ್ನು, ಬಧಿರ ವೀಣಾಗಾನವನ್ನು, ಜನ್ಮಾಂಧ ಮನೋಹರವಾದ ಮುಕುರವನ್ನು ಹಳಿದಂತೆ ಅಜ್ಞ ಕಾವ್ಯವನ್ನು ಹಳಿದರೆ ಅದಕ್ಕೆ ನಷ್ಟವಾಗುತ್ತದೆಯೆ? ಕಾಗೆ ಅರಣ್ಯದಲ್ಲಿ ಸಿಹಿಹಣ್ಣುಗಳನ್ನು ತೊರೆದು ಬೇವಿನ ಹಣ್ಣನ್ನಪೇಕ್ಷಿಸುವಂತೆ ದುಷ್ಟವಿಮರ್ಶಕ ಕೃತಿಯಲ್ಲಿ ದೋಷವನ್ನು ಮಾತ್ರ ಹುಡುಕುತ್ತಾನೆ. ರವಿರುಚಿ ಕೌಶಿಕದೃಷ್ಟಿಗೆ ಮಬ್ಬಾಗಿ ಕಾಣುವಂತೆ ಖಳಬುದ್ಧಿಗೆ ಗುಣವೂ

ದೋಷವಾಗಿ ಕಾಣುತ್ತದೆ. ಕೃತಿನಿಂದಕ ಕೃತಿಯನ್ನು ತೆಗಳ ಬಲ್ಲನೆ ಹೊರತು, ಹೊಸಕೃತಿಯನ್ನು ನಿರ್ಮಿಸಲಾರನೆಂಬು ದನ್ನು ಕವಿ ಸೊಗಸಾಗಿ ತಿಳಿಸುತ್ತಾನೆ.

ತೆಗಟಿಲ್ ಬಲ್ಲಂ ಖಳನೇಂ
ನೆಗಟಿಲ್ ಬಲ್ಲನೆ ನವೀನ ಕೃತಿಯಂ ಶಾಖಾ
ಮೃಗಮಲರ ಮಾಲೆಗೀಟಿಲ್
ಮಿಗೆ ಬಲ್ಲುದದಲ್ಲದಂತಿರೇಂ ರಚಿಯಿಕುಮೇ

ಷಡಕ್ಷರದೇವ ಕನ್ನಡಸಂಸ್ಕೃತೋಭಯ ಭಾಷೆಗಳಲ್ಲಿಯೂ ಅದ್ವಿತೀಯ ಪಂಡಿತನಾಗಿದ್ದನು; ಎರಡು ಭಾಷೆಗಳಲ್ಲಿಯೂ ಸರಸವಾಗಿ ನಿರರ್ಗಳವಾಗಿ ಬರೆಯಬಲ್ಲ ಸಾಮರ್ಥ್ಯವನ್ನು ಸಂಪಾದಿಸಿದ್ದನು. ಕವಿಗೆ 'ಉಭಯಕವಿತಾವಿಶಾರದ' ಎಂಬ ಬಿರುದಿದ್ದ ಹಾಗೆ ಆಶ್ವಾಸಾಂತ್ಯಗದ್ಯದಿಂದ ಗೊತ್ತಾಗುತ್ತದೆ. ಕವಿತಾಶಕ್ತಿ ಹನ್ನೊಂದನೆಯ ವರ್ಷದ ಹರೆಯದಲ್ಲಿಯೆ ದೊರೆ ಕೊಂಡಿತ್ತೆಂದು ಅವನೇ ಹೇಳಿಕೊಳ್ಳುತ್ತಾನೆ. ಆ ಶಕ್ತಿ ಕೇವಲ ಆಗಂತುಕವಲ್ಲ; 'ಬಹುತರ ಜನ್ಮಕೋಟಿಗಳೊಳಾರ್ಜಿಸಿ ದುತ್ತಮ ಪುಣ್ಯಪೇಟಿಯಿಂ; ಮಹಿಯೊಳೆ ಸತ್ಕವಿತ್ವ ದಿವಿ ಷನ್ಮಣಿ ಸಾರ್ಗುಮದೀಗುಮದ್ಭುತಾವಹ ಸುಖಮಂ'; ಇಷ್ಟೇ ಅಲ್ಲದೆ ಈ ಶಕ್ತಿಯಿಂದ ಉಜ್ಜ್ವಳಕೀರ್ತಿ ಪರಾರ್ಥಸಾಧನೆ ಈಶ್ವರ ಪ್ರೇಮಲಾಭ—ಇವು ಸಂಘಟಿಸುತ್ತವೆಂದು ಹೇಳು ತ್ತಾನೆ. ಆದುದರಿಂದಲೆ ಈಶ್ವರಪಾರ್ವತಿಯರಂತಿರುವ ವಾಗರ್ಥವನ್ನು ಸಾಮಾನ್ಯಮಾನವರ ಸ್ತುತಿಗೆ ಬಳಸದೆ, ಈಶ್ವರ ಸಾಕ್ಷಾತ್ಕಾರಕ್ಕಾಗಿ ಮಾತ್ರ ಬಳಸಬೇಕೆಂಬುದು ಅವನ ಆಶಯ. ಈಶ್ವರ ಕೃಪೆಯಿಂದಲೂ ಪೂರ್ವಾರ್ಜಿತ ಪುಣ್ಯ

ದಿಂದಲೂ ತಪೋಮಹಿಮೆಯಿಂದಲೂ ಕವಿತಾಶಕ್ತಿ ಪ್ರಾಪ್ತ ವಾಗಿರಲು

ಎಳವರಯದೊಳಖಿಳ ಕಳಾ
ವಿಳಾಸಮಂ ಕಂಡು ಮಚ್ಚಿ ಬರೆ ಕವಿತಾ ಕೋ
ಮಳೆಯುವಳ್ಗಿರ್ದಯಿತ್ತಂ ಯತಿ
ತಿಳಕಂ ನೀನೆನಿಪುದಿಳೆಗಿದಚ್ಚರಿಯಲ್ತೇ

ನಿನಗೆ ನಿಸರ್ಗಮಲ್ತೆ ನಿರಹಂಕೃತಿ ನಿರ್ಮಲಬುದ್ಧಿ ಪುದ್ಧವ
ರ್ತನೆ ಶಿವಯೋಗಮಾಗಮ ವಿಚಾರತೆ ಸದ್ಗುರುಭಕ್ತಿ ಶೈವಕಾ
ವ್ಯನಿವಹ ಸತ್ಪುರಾಣ ತತಿ ತರ್ಕ ಸಮುಚಿತ ಷಟ್ಸ್ಥಲಾಂಕ ಶಾ
ಸ್ತ್ರನಿಚಯ ಸಾರದರ್ಶನಮಿಳಾಪತಿ ಪೂಜಿತ ಪಾದಪಂಕಜಾ

ಎಂದು ವಿಬುಧಸಮಿತಿ ಕೊಂಡಾಡಿ ಕಾವ್ಯರಚನೆಗೆ ಕವಿಯನ್ನು ಪ್ರೇರಿಸುತ್ತದೆ.

ಕವಿ ಸಂಸ್ಕೃತದಲ್ಲಿ ಬರೆದ ಗ್ರಂಥಗಳು ಮುಖ್ಯವಾಗಿ ಮೂರು: ಕವಿಕರ್ಣರಸಾಯನ, ಶಿವಾಧಿಕ್ಯರತ್ನಾವಳಿ, ಭಕ್ತಾಧಿಕ್ಯ ರತ್ನಾವಳಿ. ಶಿವಭಕ್ತನಾದ ಚೋಳಭೂಪಾಲನೊಬ್ಬನನ್ನು ಕುರಿತ ಕಾವ್ಯ ಮೊದಲನೆಯದು; ಎರಡು ಮತ್ತು ಮೂರನೆಯವು ಹೆಸರೇ ಸೂಚಿಸುವಂತೆ ಶಿವಪಾರಮ್ಯವನ್ನೂ ಭಕ್ತರ ಮಹಿಮೆಯನ್ನೂ ಸ್ಥಾಪಿಸುವ ಗ್ರಂಥಗಳು. ಇವುಗಳ ಜೊತೆಗೆ ಶಿವಸ್ತವ ಮಂಜರಿ, ಬಸವಾಷ್ಟಕ, ವೀರಭದ್ರೋದಾಹರಣ ಗದ್ಯ ಮತ್ತು ನೀಲಾಂಬಿಕಾ ಸ್ತೋತ್ರ ಮೊದಲಾದ ಹಲವು ಸ್ತೋತ್ರಗಳನ್ನು ಬರೆದಿದ್ದಾನೆ. ರಾಜಶೇಖರವಿಳಾಸ, ವೃಷಭೇಂದ್ರ ವಿಜಯ ಮತ್ತು ಶಬರಶಂಕರವಿಲಾಸ-ಇವು ಮೂರೂ ಕನ್ನಡದಲ್ಲಿ ರಚಿತವಾದ ಚಂಪೂಗ್ರಂಥಗಳು.

ರಾಜಶೇಖರವಿಳಾಸ ಕವಿ ಬರೆದ ಗ್ರಂಥಗಳಲ್ಲಿ ಮೊದಲನೆಯದು. ಬಹುಶಃ ಇದು ಅವನ ಎಳೆಹರೆಯದಲ್ಲಿ ಅಥವಾ ಯೌವನೋದಯ ಕಾಲದಲ್ಲಿ ರಚಿತವಾಗಿರಬೇಕು. ಇದು ಶೃಂಗಾರರಸಪ್ರಚುರವಾಗಿ ಬಹುಜನ ಮಾನ್ಯವಾದ ಗ್ರಂಥವೆಂದು ಪ್ರಸಿದ್ಧವಾಗಿದೆ. ಇದರ ಹಿರಿಮೆಯನ್ನು ಸ್ಥಾಪಿಸುವುದಕ್ಕಾಗಿ ಕೆಲವು ಕಥೆಗಳೂ ಹುಟ್ಟಿಕೊಂಡಿವೆ. ಒಂದು ನೇಮಿಚಂದ್ರನ ಲೀಲಾವತಿಗೆ ಸಂಬಂಧಿಸಿದುದು. ಒಮ್ಮೆ ಜೈನಮತಸ್ಥರು ನೇಮಿಚಂದ್ರನ ಲೀಲಾವತಿ ಎಂಬ ಚಂಪೂ ಗ್ರಂಥವನ್ನು ಆನೆಯ ಮೇಲಿಟ್ಟು ಕಾವ್ಯರಸ ಸ್ರವಿಸಿ ಭೂಮಿಯ ಮೇಲೆ ಬೀಳಬಾರದೆಂಬ ಉದ್ದೇಶದಿಂದ ಅವರ ಹೊಟ್ಟೆಗೆ ಬೆಳ್ಳಿಯ ತೊಟ್ಟಿಲನ್ನು ಕಟ್ಟಿ, ಬೀದಿಯಲ್ಲಿ ಮೆರವಣಿಗೆ ಮಾಡುತ್ತಿದ್ದರಂತೆ. ಷಡಕ್ಷರಿ ಅದರ ಹೆಗ್ಗಳಿಕೆಯನ್ನು ಕೇಳಿ, ಅದಕ್ಕಿಂತಲೂ ರಸಭರಿತವಾದ ಕಾವ್ಯವನ್ನು ಒಂದು ವರ್ಷದ ಅವಧಿಯಲ್ಲಿ ತೋರಿಸುವುದಾಗಿ ಸಂಕಲ್ಪತೊಟ್ಟು, ರಾಜಶೇಖರವಿಳಾಸವನ್ನು ರಚಿಸಿ ಪಂಡಿತರ ಶ್ಲಾಘನೆಗೆ ಪಾತ್ರನಾದನಂತೆ. ರುದ್ರಭಟ್ಟ ಲಕ್ಷ್ಮೀಶರಿಗೂ ಷಡಕ್ಷರಿಗೂ ಹೀಗೆಯೆ ಸಂಬಂಧ ಕಲ್ಪಿಸಿ ಬರೆದ ಕಥೆಗಳೂ ಕೆಲವಿವೆ. ಈ ಕವಿಗಳು ಸಮಕಾಲೀನರಲ್ಲವಾದರೂ ರಾಜಶೇಖರ ವಿಳಾಸದ ಹಿರಿಮೆಯನ್ನೂ ಪ್ರಾಚುರ್ಯವನ್ನೂ ಎತ್ತಿ ತೋರಿಸುವುದಕ್ಕಾಗಿ ಇವು ಹುಟ್ಟಿಕೊಂಡಿರಬೇಕೆಂದು ಕಾಣುತ್ತದೆ.

## ೩. ರಾಜಶೇಖರವಿಳಾಸ

ಪಂಚಾಕ್ಷರೀ ಮಹಿಮೆಯ ಪ್ರಚಾರಕ್ಕಾಗಿ ತಮಿಳು ನಾಡಿನಲ್ಲಿ ಬಹಳ ಹಿಂದಿನಿಂದ ಪ್ರಸಿದ್ಧವಾಗಿರುವ ಸತ್ಯೇಂದ್ರ ಚೋಳನ

ಕಥೆಯೇ ಕೆಲವು ಕನ್ನಡ ಕಾವ್ಯಗಳಿಗೆ ತಲಕಾವೇರಿ. ಅಲ್ಲಿ ಪೌರಾಣಿಕ ಮತ್ತು ಐತಿಹಾಸಿಕ ಸಂಗತಿಗಳ ಸಮ್ಮಿಲನದಿಂದ ಸಂಘಟಿತವಾದ ಕಾವ್ಯವಸ್ತುವನ್ನು ಹರಿಹರ ಸೋಮರಾಜ ಮತ್ತು ಸುರಂಗಾದಿ ಕವಿಗಳು ತಮ್ಮ ಕಾವ್ಯದಲ್ಲಿ ಬಳಸಿಕೊಂಡಿದ್ದಾರೆ. ಕಥೆ ತುಂಬ ಚಿಕ್ಕದು, ಅದರ ಹರವು ಕಡಮೆ. ಇವನ್ನೇ ಬಳಸಿಕೊಂಡು ಸೂಕ್ತ ಕಂಡೆಡೆ ತನ್ನ ರುಚಿ ಅಭಿರುಚಿಗಳಿಗೆ ಒಗ್ಗುವಂತೆ ಹಿಗ್ಗಲಿಸಿಕೊಂಡು ಗುಬ್ಬಿಯ ಮಲ್ಲಣಾರ್ಯ (೧೫೩೦) ವರ್ಣಕವಾಗಿ ರಚಿಸಿದ 'ಭಾವಚಿಂತಾರತ್ನ' ಎಂಬ ಕಾವ್ಯವೇ ರಾಜಶೇಖರವಿಳಾಸಕ್ಕೆ ಮೂಲ. ಪಿಳ್ಳೈನೈನಾರರು ತಮಿಳಿನಲ್ಲಿ ಬರೆದ ಇತಿಹಾಸಕಥೆಯನ್ನು "ವರಮಲ್ಲಣಾರ್ಯರುರ್ವೀಕವಿರಾಜರಾಜಿನುತಮಾಗಿರೆ ವರ್ಣಕದಿಂದೆ ಭಾವರತ್ನಾಕರವಾಗಿ ಪೇಳ್ದರ್; ಅದನೊಪ್ಪಿರೆ ವಸ್ತುಕವಾಗಿ ಪೇಳ್ವುದು" ಎಂದು ಕವಿಯೇ ಹೇಳಿದ್ದಾನೆ.

ಕನ್ನಡ ಗ್ರಂಥಗಳಿಗೆಲ್ಲ ಮೂಲವಾದ ಸತ್ಯೇಂದ್ರಚೋಳನ ಕಥೆ ಇದು: ಧರ್ಮದೇವಪುರದಲ್ಲಿ ಸತ್ಯೇಂದ್ರಚೋಳ ರಾಜ್ಯಭಾರ ಮಾಡುತ್ತಿರುತ್ತಾನೆ. ಬಹಳದಿನ ಸಂತಾನವಿಲ್ಲದೆ ಚಿಂತಾಕ್ರಾಂತನಾಗಿದ್ದ ದೊರೆಯ ಬಳಿಗೆ ಚಿದ್ಘನಶಿವಾಚಾರ್ಯರೆಂಬ ಗುರುಗಳು ಬಂದು ಶಿವನ ಪಂಚವಿಂಶತಿಲೀಲೆಗಳನ್ನು ಹೇಳಿ ಸಮಾಧಾನ ಪಡಿಸುತ್ತಾರೆ. ಶಿವಲೀಲಾ ಸಂಬಂಧವಾದ ಕಥೆಗಳನ್ನು ಕೇಳುತ್ತಿದ್ದ ರಾಣಿ ಅಮೃತವತೀದೇವಿಗೂ ಮಕ್ಕಳ ಬಯಕೆ ಮೂಡಿ ಕಾತರಳಾಗುತ್ತಾಳೆ. ಮಂತ್ರಿಪುತ್ರ ಮಿತವಚನನನ್ನೇ ತಮ್ಮ ಮಗನೆಂದು ಮೋಹಿಸಿ ಮುದ್ದಿಸಿ ಬೆಳೆಸಿದ ಆ ದಂಪತಿಗಳು ತಮಗೊಬ್ಬ ಮಗನನ್ನು ಕರುಣಿಸುವಂತೆ ಗುರುವನ್ನು ಬೇಡುತ್ತಾರೆ. ಗುರುಕರುಣೆಯಿಂದ ಹುಟ್ಟಿದ

ಮಗ ಮಂತ್ರಲಕ್ಷ ಮಿತವಚನನೊಡನೆ ಬೆಳೆದು ದೊಡ್ಡವ ನಾಗುತ್ತಾನೆ. ಬೇಟೆಯಲ್ಲಿ ಸಿಕ್ಕಿದ ಸಿಂಹವೇ ಕಾರಣವಾಗಿ ಸತ್ಯೇಂದ್ರನ ಕಡೆಯವರಿಗೂ ಸಿಂಹಳೇಂದ್ರನ ಕಡೆಯವರಿಗೂ ಮನಸ್ತಾಪ ಹುಟ್ಟಿ, ಯುದ್ಧವಾಗಿ ಪರಿಣಮಿಸುತ್ತದೆ. ಮಂತ್ರಿ ಪತಿಮೋಹಿ ಸಿಂಹಳೇಂದ್ರನನ್ನು ಸೋಲಿಸಿ, ಅವನ ಮಕ್ಕಳಾದ ಕಮಲೆ ಮತ್ತು ಕುಮುದಿನಿಯರನ್ನು ಮಿತವಚನ ಮತ್ತು ಮಂತ್ರಲಕ್ಷರಿಗೆ ಮದುವೆಮಾಡಿಸುತ್ತಾನೆ.

ಹೀಗಿರುವಾಗ ಒಂದುದಿನ ಸಿಂಧುದೇಶದ ದೊರೆ ಎರಡು ದಿವ್ಯಾಶ್ವಗಳನ್ನು ತಂದು ಸತ್ಯೇಂದ್ರನಿಗೆ ಕಾಣಿಕೆಯಾಗಿ ಕೊಡುತ್ತಾನೆ. ಆ ಕುದುರೆಗಳನ್ನು ಹತ್ತಿ ವೈಹಾಳಿಗೆ ಹೋಗ ಬೇಕೆಂದು ಮಂತ್ರಲಕ್ಷ ಮಿತವಚನನಿಗೆ ತಿಳಿಸುತ್ತಾನೆ. ಪಳಗದ ಕುದುರೆಗಳನ್ನು ಹತ್ತಿದರೆ ಪುರಜನರಿಗೆ ಅಪಾಯವೊದಗ ಬಹುದೆಂದೂ, ತಂದೆಯ ಆಗ್ರಹಕ್ಕೂ ದಂಡನೆಗೂ ತುತ್ತಾಗ ಬಹುದೆಂದೂ ಮಿತವಚನ ವಿವೇಕಹೇಳುತ್ತಾನೆ. ಆದರೆ ಮಂತ್ರಲಕ್ಷನ ಹಠದಿಂದ ಇಬ್ಬರೂ ಕುದುರೆ ಹತ್ತಿ ಹೋಗು ತ್ತಾರೆ. ವೈಹಾಳಿಯಿಂದ ಹಿಂದಿರುಗಿ ಬರುವಾಗ ಮಿತವಚನನ ಕುದುರೆ ತಿರಿಕೋಳವಿನಾಚಿ ಎಂಬ ಶಿವಭಕ್ತೆಯ ಮಗ ಶಂಕರ ನನ್ನು ತುಳಿದು ಸಾಯಿಸುತ್ತದೆ. ಪತಿವಿಯೋಗಿಯಾದ ತಿರಿ ಕೊಳವಿನಾಚಿ ಏಕಮಾತ್ರ ಪುತ್ರನ ಸಾವಿನಿಂದ ನೊಂದು ದೊರೆಗೆ ದೂರು ಕೊಡುತ್ತಾಳೆ. ದೊರೆ ನಡೆದ ಸಂಗತಿಯನ್ನು ವಿಚಾರಿಸಿ ಮಿತವಚನನಿಗೆ ಮರಣದಂಡನೆ ವಿಧಿಸುತ್ತಾನೆ. ಮಂತ್ರಲಕ್ಷ ಆ ಅಪರಾಧ ತನ್ನದೇ ಎಂದು ನಡೆದುದನ್ನೆಲ್ಲ ತಿಳಿಸಿ ಮರಣದಂಡನೆಗೆ ಸಿದ್ಧನಾಗುತ್ತಾನೆ. ರಾಜಾಜ್ಞೆಯನ್ನು ನೆರವೇರಿಸಲಾರದ ಮಂತ್ರಿ ಪತಿಮೋಹಿ ಕೊರಳನ್ನು ಕೊಯ್ದು

ಕೊಳ್ಳುತ್ತಾನೆ. ಅನಂತರ ಕೊಲೆಯ ಕೆಲಸಕ್ಕೆ ಸಂದಾಯಿ ಯೆಂಬ ಭೃತ್ಯ ನೇಮಕವಾಗುತ್ತಾನೆ. ಆ ಭೃತ್ಯ ರಾಜಕುಮಾರನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗಿ ಪಂಚಾಕ್ಷರೀಮಂತ್ರವನ್ನು ಮರೆಯಬಾರದೆಂದು ತಿಳಿಸಿ ತಲೆಯನ್ನು ಕಡಿಯುತ್ತಾನೆ. ಮುಂಡದಿಂದ ಬೇರ್ಪಟ್ಟ ರುಂಡ ಪಂಚಾಕ್ಷರಿಯನ್ನು ಜಪಿಸುತ್ತಿರಲು, ಆಳು ಅಚ್ಚರಿಗೊಂಡು ಅದನ್ನು ಆಸ್ಥಾನಕ್ಕೆ ತರುತ್ತಾನೆ. ದೊರೆಗೆ ನಡೆದ ಸಮಾಚಾರವನ್ನು ತಿಳಿಸಿ ಸಂದಾಯಿಯೂ ಕೊರಳು ಕೊಯ್ದು ಕೊಳ್ಳುತ್ತಾನೆ. ಅವನ ಶಿರ ಕೂಡ ಪಂಚಾಕ್ಷರಿಯನ್ನು ಜಪಿಸುತ್ತಿರುತ್ತದೆ. ಅಲ್ಲಿಗೆ ತಂದ ಶಂಕರನ ಶಿರವೂ ಪಂಚಾಕ್ಷರಿಯನ್ನು ಜಪಿಸುತ್ತದೆ. ಮಂತ್ರಮಹಿಮೆಯನ್ನು ಕಂಡ ದೊರೆ, ಅಲ್ಲಿಗೆ ಬಂದ ಮಿತವಚನ ಇಬ್ಬರೂ ಪ್ರಾಣ ಬಿಡುತ್ತಾರೆ. ಅವರ ಶಿರಸ್ಸುಗಳೂ ಮಂತ್ರವನ್ನು ಜಪಿಸುತ್ತವೆ. ಈ ವೃತ್ತಾಂತವನ್ನೆಲ್ಲ ಕೇಳಿದ ಅಮೃತವತಿಯೂ ಕೊರಳಿಗೆ ಖಡ್ಗವನ್ನೆತ್ತಲು ಸಕಲಗಣ ಸಮೇತನಾಗಿ ಗೌರೀಶ ಪ್ರತ್ಯಕ್ಷನಾಗುತ್ತಾನೆ. ಭಕ್ತರ ಭಕ್ತಿಗೆ ಮೆಚ್ಚಿ ಈಶ್ವರ ಎಲ್ಲರನ್ನೂ ಬದುಕಿಸಿ ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ.

ಕಥೆಯ ಮೂಲ ಸಂಕ್ಷೇಪವಾಗಿ ಇಷ್ಟು. ಇದನ್ನೇ ಅಲ್ಲಿ ಇಲ್ಲಿ ವಿಸ್ತರಿಸಿ, ಹೆಚ್ಚು ಮಾರ್ಪಾಟಿಲ್ಲದೆ ಮಕ್ಕಾಮಕ್ಕಿಯಾಗಿ ಇಳಿಸಿ ಮಲ್ಲಣಾರ್ಯ ಭಾವಚಿಂತಾರತ್ನವನ್ನು ರಚಿಸಿದ್ದಾನೆ. ಷಡಕ್ಷರದೇವನಿಗೆ ಭಾವಚಿಂತಾರತ್ನ ಮೂಲವಾದರೂ, ಕಥೆಯ ಜಾಡು ಅದೆ ಆದರೂ, ತನ್ನ ಪ್ರತಿಭೆಗೆ ತನ್ನ ದರ್ಶನಕ್ಕೆ ಹೊಂದುವಂತೆ ಅಲ್ಲಲ್ಲಿ ಅನೇಕ ಮಾರ್ಪಾಟುಗಳನ್ನು ಮಾಡಿ ಕೊಂಡು ತನ್ನ ಕಲ್ಪನಾವಿಲಾಸವನ್ನು ಮೆರೆದು, ಇದೊಂದು

ನವೀನಕೃತಿಯೆನ್ನುವಂತೆ ಕಾವ್ಯರಚನೆಮಾಡಿದ್ದಾನೆ. ವಸ್ತು ಹಳೆಯದು ಮತ್ತು ಪ್ರಸಿದ್ಧವಾದುದು. ಶಿವಪಂಚಾಕ್ಷರೀ ಮಹಿಮೆ, ನ್ಯಾಯಪರತೆ, ಸತ್ಯಸಂಧತೆ ಮೊದಲಾದ ದೈವೀ ಗುಣಗಳನ್ನು ಮಾನವತೆಗೆ ಭಂಗಬಾರದಂತೆ ರಸಪ್ರತಿಪಾದನೆಗೆ ಆತಂಕವೊದಗದಂತೆ ಸರ್ವರಿಗೂ ಹೃದಯಂಗಮವಾಗುವಂತೆ ವಿವರಿಸಬೇಕೆನ್ನುವುದೇ ಕವಿಯ ಮುಖ್ಯೋದ್ದೇಶ. ಇದಕ್ಕೆ ಕಥೆ ಒಂದು ತಡಿಕೆ ಮಾತ್ರ. ತಡಿಕೆಯಾದರೂ ಅದನ್ನು ತನ್ನ ಕಲಾಕುಶಲತೆಯ ಅಭಿವ್ಯಕ್ತಿಗೆ ಅನುಕೂಲವಾಗುವಂತೆ ಕವಿ ಹೆಣೆದುಕೊಳ್ಳಬೇಕಾಗುತ್ತದೆ. ವಸ್ತು ಎಷ್ಟು ಮುಖ್ಯವೊ ವಸ್ತುಸಂವಿಧಾನವೂ ಅಷ್ಟೇ. ಮುಖ್ಯ—ಒಂದುಕ್ಕೆ ವಸ್ತುವಿಗಿಂತ ಮಿಗಿಲೆನ್ನಬಹುದು. ರೂಢಿಯಲ್ಲಿಲ್ಲದ ಹಳೆಯ ಆಭರಣವನ್ನು ಕರಗಿಸಿ ನವೀನಾಭಿರುಚಿ ಅಪೇಕ್ಷಿಸುವ ಹೊಸ ಆಭರಣವನ್ನು ಕೆತ್ತಿಸುವಂತೆ ಕವಿ ಹಳೆಯ ವಸ್ತುವನ್ನು ತನ್ನ ಕಾವ್ಯಕ್ಕೆ ಬಳಸಿಕೊಳ್ಳುತ್ತಾನೆ. ಅಕ್ಕಸಾಲೆ ತನ್ನ ಕರ್ಮದಲ್ಲಿ ಕುಶಲನಾದರೆ ಸರಿ, ಇಲ್ಲವಾದರೆ ಎಲ್ಲ ಹದಗೆಡುತ್ತದೆ.

ರಾಜಶೇಖರವಿಳಾಸ ಹಳೆಯ ಕತೆಯೊಂದರ ನಕಲಲ್ಲ; ಪಿಷ್ಟಪೇಷಣವಲ್ಲ. ಅವನ ಕಥಾಸಂವಿಧಾನವನ್ನು ಗಮನಿಸಿದರೆ ಈ ಅಂಶ ಸ್ಥಿರಪಡುತ್ತದೆ. ಇಲ್ಲಿಯ ಕಥಾನಾಯಕ ಸತ್ಯೇಂದ್ರಚೋಳನಲ್ಲ, ಅವನ ಮಗ ರಾಜಶೇಖರ ನಾಮಾಂಕಿತನಾದ ಮಂತ್ರಲಕ್ಷ. ಇವರಿಂದ ದೊರೆಯ ರಾಜಗಾಂಭೀರ್ಯಕ್ಕಾಗಲಿ ಸತ್ಯಸಂಧತೆಗಾಗಲಿ ನ್ಯಾಯನಿಷ್ಠೆಗಾಗಲಿ ಈಶ್ವರಭಕ್ತಿಗಾಗಲಿ ಭಂಗಬಂದಿಲ್ಲ. ಸಮಯ ಬಂದಾಗ ರಾಜಧರ್ಮವನ್ನು ಕಾರ್ಯಗತಮಾಡಲು ಇವರಿಂದ ಯಾವ ಅಡ್ಡಿಯೂ ಇಲ್ಲ. ಈ ಕಾವ್ಯದಲ್ಲಿ ನವರಸಗಳನ್ನೂ ಅಷ್ಟಾ

ದಶವರ್ಣನೆಯನ್ನೂ ಸಮಾವೇಶಗೊಳಿಸಬೇಕೆಂಬುದು ಕವಿಯ ಆಶಯ. ಅದರಲ್ಲಿಯೂ ಶೃಂಗಾರದ ಕಡೆಗೆ ಕವಿಯ ಒಲವು ಹೆಚ್ಚು. ಸತ್ಯೇಂದ್ರಚೋಳ ವಯಸ್ಸಾದ ದೊರೆ. ಮೇಲಾಗಿ ಶಿವಭಕ್ತನಾದುದರಿಂದ ಮರಣಪರ್ಯಂತ ರಾಜಭೋಗದಲ್ಲಿ ಮುಳುಗಿ ಶಿವಸ್ಮರಣೆಯನ್ನು ಮರೆಯುವುದು ಸರಿಯಲ್ಲ. ಅಲ್ಲದೆ ಅವನ ಜೀವನದಲ್ಲಿ ಶೃಂಗಾರಾದಿ ರಸಾಭಿವ್ಯಕ್ತಿಗಾಗಲಿ ಅಷ್ಟಾದಶವರ್ಣನೆಗಾಗಲಿ ಅವಕಾಶ ಕಡಮೆ. ಔಚಿತ್ಯದ ಗಡಿಯನ್ನು ಮೀರಿ ಕಥಾನಾಯಕನ ಜೀವನದಲ್ಲಿ ವಿರೋಧಾಭಾಸದ ಸನ್ನಿವೇಶಗಳನ್ನು ಚಿತ್ರಿಸುವುದು ಸರಿಯಲ್ಲ. ಷಡಕ್ಷರಿ ಮಾನವಹೃದಯವನ್ನು ಚೆನ್ನಾಗಿ ಬಲ್ಲವನಾದುದರಿಂದ, ಮಾನವ ಜೀವನದ ಎಲ್ಲ ಮುಖಗಳನ್ನು ಕಂಡವನಾದುದರಿಂದ ಈ ಮಾರ್ಪಾಟನ್ನು ಮಾಡಿಕೊಂಡಿದ್ದಾನೆ. ಮುಪ್ಪಿನ ದೊರೆ ದಿವ್ಯಾಶ್ವವನ್ನು ಏರುವುದಾಗಲಿ, ಚಂದ್ರಿಕಾವಿಹಾರ ವೈಹಾಳಿ ಕೇಳಿಗಳಲ್ಲಿ ಭಾಗವಹಿಸುವುದಾಗಲಿ, ಮೃಗಯಾವಿಹಾರ ದಿಗ್ವಿಜಯಾದಿಗಳನ್ನು ಕೈಗೊಳ್ಳುವುದಾಗಲಿ, ದಿಗ್ವಿಜಯದ ಫಲವಾಗಿ ದೊರೆಯುವ ಕನ್ಯಾರತ್ನವನ್ನು ಮದುವೆಯಾಗುವುದಾಗಲಿ ಸರಿಯಲ್ಲ. ಕಥೆಯಲ್ಲಿ ಬರುವ ದುರಂತಕ್ಕೆ, ಶಿವ ಪಂಚಾಕ್ಷರೀ ಮಹಿಮೆಯ ಪ್ರಕಾಶನಕ್ಕೆ ಮತ್ತು ಅದರ ಸ್ಥಾಪನೆಗೆ ರಾಜಶೇಖರ ಮುಖ್ಯಕಾರಣ ಎಂಬುದನ್ನು ಮರೆಯಬಾರದು. ಈ ಎಲ್ಲ ಕಾರಣಗಳಲ್ಲಿ ರಾಜಶೇಖರನನ್ನು ಕಥಾನಾಯಕನನ್ನಾಗಿ ಮಾಡಿಕೊಂಡುದರ ಔಚಿತ್ಯ ಕಾಣುತ್ತದೆ.

ಅಮೃತವತಿಯ ಪುತ್ರದ್ರೋಹದ ಪ್ರಕರಣವನ್ನು ಷಡಕ್ಷರಿ ಬುದ್ಧಿಭಾವಗಳಿಗೆರಡಕ್ಕೂ ಒಪ್ಪಿಗೆಯಾಗುವಂತೆ ಮನೋಹರವಾಗಿ ವರ್ಣಿಸಿದ್ದಾನೆ. ಚಿಪ್ಪನ ಶಿವಾಚಾರ್ಯರು ಬಂದು

ಈಶ್ವರನ ಪಂಚವಿಂಶತಿ ಲೀಲೆಗಳನ್ನು ವರ್ಣಿಸಿದ ಮೇಲೆ ಸಂತಾನ ಮೋಹ ರಾಜರಾಣಿಯರನ್ನು ಕಾಡುತ್ತದೆಂದು ಹೇಳುವುದು ತುಂಬ ಅಸಹಜವಾಗಿ ಕಾಣುತ್ತದೆ. ಅಮೃತವತಿ ರಾಣಿ; ಅನುಕೂಲ ದಾಂಪತ್ಯದ ಭಾಗ್ಯವನ್ನು ಪಡೆದು ಅದರ ರುಚಿಯನ್ನನುಭವಿಸಿದ ಶಿವಭಕ್ತೆ. ಮಕ್ಕಳಿಲ್ಲದೆ ಯೌವನವೂ ಹಿಂಜರಿಯುತ್ತಿದೆ; ಜೊತೆಗೆ ಮಕ್ಕಳಿಲ್ಲದ ವ್ಯಥೆಯ ತಾಪವನ್ನು ಶಮನ ಮಾಡಿಕೊಳ್ಳುವುದಕ್ಕಾಗಿಯೇ ಎನ್ನುವಂತೆ ಮಂತ್ರಿಸುತನನ್ನು ಸಾಕಿಕೊಂಡಿದ್ದಾಳೆ. ಆದರೆ ಸಾಕುಮಗ ಎಷ್ಟೇ ಒಳ್ಳೆಯವನಾದರೂ ಔರಸಪುತ್ರನ ಸ್ಥಾನದಲ್ಲಿ ನಿಲ್ಲಲಾರನೆಂಬುದು ಲೋಕಾನುಭವದ ವಿಷಯ. ತನ್ನನಂತರ ರಾಜ್ಯಾಧಿಕಾರ ತನ್ನ ರಕ್ತಸಂತಾನಕ್ಕೆ ಸಲ್ಲಬೇಕೆಂಬ ಬಯಕೆ ಮಾನವ ಸಹಜವಾದುದು. ಆ ದಂಪತಿಗಳ ಭಕ್ತಿ ಪರಾಕಾಷ್ಠೆಯೇ, ಅವರ ಈ ಸಂತಾಪವೇ ಆಚಾರ್ಯರನ್ನು ಅರಮನೆಗೆ ಸೆಳೆದು ತಂದಂತೆ ಈ ಕಾವ್ಯದಲ್ಲಿ ಧ್ವನಿತವಾಗುತ್ತದೆ. ಈ ಮೊದಲೇ ರಾಣಿಗೆ ಮಕ್ಕಳ ಬಯಕೆಯಾಗಿ ಚಿಂತೆಗೆ ಸೆರೆಯಾಗಿರಲು ರಾಜ ಸಮಾಧಾನ ಹೇಳುತ್ತಾನೆ:

...................ಕೇಳಂ
ಗನೆ ನೀನೆಂದಂತೆ ತನಯನಂ ಪಡೆಯುವೆ ಬಾ
ಳ್ವನ ಸಂಸಾರಮಸಾರಂ
ತೆನೆಯಿಲ್ಲದ ನವ ಪಲಾಲದಂತಿರೆ ಧರೆಯೊಳ್

ಸುರತರುವಿರೆ ಸಿರಿವಡೆವುದು
ಪಿರಿವೆ ಸರೋಜಾಕ್ಷಿ ಮದ್ಗುರೂತ್ತಮನೊಲ್ದು
ಪ್ಪಿರೆ ತತ್ಪ್ರಸಾದ ಬಲದಿಂ
ಪಿರಿದು ಮದಿಷ್ಟಮನೆ ಪಡೆಯಲಕ್ಕುಮಮೋಘಂ

ಅಮೃತವತಿ ಚಿದ್ಘನ ಶಿವಾಚಾರ್ಯರನ್ನು ಬೇಡಿ ಸಂತಾನ ವರವನ್ನು ಪಡೆದಳೆಂದು ಬೇರೆಡೆ ನಿರೂಪಿತವಾಗಿದೆ. ಇದು ಚಿದ್ಘನ ಶಿವಾಚಾರ್ಯರ ಮಹಿಮೆಗಾಗಲೀ ರಾಣಿಯ ಭಕ್ತಿ ನಿಷ್ಠೆಗಾಗಲೀ ಗಾಂಭೀರ್ಯಕ್ಕಾಗಲೀ ಗೌರವ ತರುವಂಥದಲ್ಲ. ಆಚಾರ್ಯರೇ ರಾಣಿಯ ವ್ಯಾಕುಲವನ್ನೂ ಅವಳ ಬಯಕೆ ಯನ್ನೂ ದಿವ್ಯದೃಷ್ಟಿಯಿಂದರಿತು ವರಪ್ರದಾನಮಾಡಿದಂತೆ ಷಡ ಕ್ಷರಿ ಹೇಳಿರುವುದು ಅವನ ಪ್ರತಿಭಾದರ್ಶನಕ್ಕೆ ಸಾಕ್ಷಿಯಾಗಿದೆ.

ಭಾವಚಿಂತಾರತ್ನದಲ್ಲಿ ಸಿಂಹಳೇಂದ್ರನನ್ನು ಜಯಿಸುವವನು ಮಂತ್ರಿ ಪತಿಮೋಹಿ; ಅವನ ಮಕ್ಕಳು ಕಮಲೆ ಕುಮುದಿನಿ ಯರನ್ನು ತಂದು ಮಗನಿಗೂ ಯುವರಾಜನಿಗೂ ಮದುವೆ ಮಾಡಿಸುವವನೂ ಮಂತ್ರಿಯೆ. ರಾಜಶೇಖರ ವಿಳಾಸದಲ್ಲಿ ಸಿಂಹಳೇಂದ್ರನನ್ನು ಜಯಿಸುವವನು ರಾಜಶೇಖರನೆಂದೂ, ಸಿಂಹಳೇಂದ್ರನಿಗೆ ಒಬ್ಬಳೆ ಮಗಳೆಂದೂ, ಅವಳ ಹೆಸರು ಸರ್ವ ಮಂಗಳೆಯೆಂದೂ, ಸಂಗ್ರಾಮವಿಜಯಿಯಾದ ರಾಜಶೇಖರ ನನ್ನು ಸರ್ವಮಂಗಳೆ ಜಯಿಸಿದಳೆಂದೂ ಕಥೆ ಕಲ್ಪಿತವಾಗಿದೆ. ಕಥಾನಾಯಕ ಕಥೆಯಲ್ಲೆಲ್ಲ ವ್ಯಾಪಿಸುವುದೂ, ದಿಗ್ವಿಜಯ ಮೊದಲಾದ ವೀರಯೋಗ್ಯವಾದ ಕಾರ್ಯಗಳಲ್ಲಿ ತೊಡಗು ವುದೂ ಸಹಜ. ರಾಜನಿದ್ದೂ–ಅದರಲ್ಲಿಯೂ ರಾಜಶೇಖರನಂಥ ವೀರಾದಿ ವೀರನಿದ್ದೂ ಕ್ಲೀಬನಂತೆ ಅನ್ಯರನ್ನು ಯುದ್ಧಕ್ಕೆ ಕಳಿಸುವುದು ಉಚಿತವಲ್ಲ. ಹಾಗೆಯೆ ಸರ್ವಾಂಗಸುಂದರನೂ ಸಂಗ್ರಾಮವೀರನೂ ಓಜೋನ್ವಿತನೂ ಆದ ರಾಜಕುಮಾರ ಯುದ್ಧದಲ್ಲಿ ಸೋತ—ಆದರೆ ಶೂರನೂ ಪರಾಕ್ರಮಿಯೂ ಆದ ವಿರೋಧಿಯ ಮಗಳ ಸೌಂದರ್ಯವನ್ನು ಮೆಚ್ಚಿ ಅವಳನ್ನು

ಪಡೆಯುವುದರಲ್ಲಿರುವ ಸೊಗಸು ಬೇರೆಯವರು ಗೆದ್ದು ತಂದ ಹೆಣ್ಣನ್ನು ಮದುವೆಯಾಗುವುದರಲ್ಲಿಲ್ಲ.

ಪಾತ್ರರಚನೆಯಲ್ಲಿಯೂ ಕವಿ ವಿಶೇಷ ಪ್ರತಿಭೆಯನ್ನೂ ಕಲ್ಪನಾಚಾತುರ್ಯವನ್ನೂ ಔಚಿತ್ಯ ಪ್ರಜ್ಞೆಯನ್ನೂ ಲೋಕಾನುಭವವನ್ನೂ ವ್ಯಕ್ತಪಡಿಸಿದ್ದಾನೆ. ಎಲ್ಲಿಯೂ ಅಸಂಗತತೆಯಾಗಲಿ ವೈಪರೀತ್ಯವಾಗಲಿ ಕಾಣುವುದಿಲ್ಲ. ಇಲ್ಲಿ ಚಿತ್ರಿತವಾಗಿರುವ ಪ್ರತಿಯೊಂದು ಪಾತ್ರವೂ ಜೀವಂತವಾಗಿದ್ದಾರೆ; ಮಾನವ ಲೋಕದ ಆದರ್ಶ ವ್ಯಕ್ತಿಗಳಂತೆ ಬಾಳಿ, ಸತ್ಯಶೌಚ ಶಿವಭಕ್ತಿ ಮೊದಲಾದ ದೈವೀಗುಣಗಳಿಂದ ಈಶ್ವರ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ಕಥಾನಾಯಕನಲ್ಲದಿದ್ದರೂ, ಆ ಸ್ಥಾನಕ್ಕೆ ಯೋಗ್ಯನಾದ ಸತ್ಯೇಂದ್ರಚೋಳ ಮೊದಲಿಂದಲೂ ಶಿವಭಕ್ತ; ಅವನು ರೂಪದಲ್ಲಿ ಪುಷ್ಪಚಾಪ, ಸೌಭಾಗ್ಯದಲ್ಲಿ ಶ್ರೀಪತಿ, ಧೈರ್ಯದಲ್ಲಿ ಧರಾಧರ, ಮಿಗಿಲಾಗಿ ಸಂಯಮಿ ಸಮದರ್ಶಿ; ಪ್ರಜಾವತ್ಸಲ; ಗುರುಗಳಲ್ಲಿ ಅನನ್ಯ ಅವ್ಯಾಜ ನಿಷ್ಠೆ ಅವನಿಗೆ. ಮಕ್ಕಳನ್ನು ಪಡೆಯುವ ಕಾತರತೆಯಿದ್ದರೂ ಆಚಾರ್ಯರು ಬಂದಾಗ ಶಿವನ ಪಂಚವಿಂಶತಿ ಲೀಲೆಗಳನ್ನು ಕೇಳುವುದರಲ್ಲಿ ಮಗ್ನನಾದನೆ ಹೊರತು, ವರವನ್ನು ಕೇಳುವುದಿಲ್ಲ. ಅವನಿಗೆ ಮೋಕ್ಷ ಸಾಮ್ರಾಜ್ಯದಲ್ಲಿರುವ ಅನುರಕ್ತಿ ಲೋಕಸಾಮ್ರಾಜ್ಯಲ್ಲಿಲ್ಲ. ಮಗ ಹರೆಯಕ್ಕೆ ಕಾಲಿಡುವುದರೊಳಗಾಗಿ ರಾಜ್ಯ ಭಾರವನ್ನು ಅವನಿಗೆ ವಹಿಸಿ, ಸನ್ಮಾರ್ಗ ಸಾಹೋದಯನಾಗಿ ಸದಾ ಶಿವಸಂಕೀರ್ತನೆಯಲ್ಲಿ ಮುಳುಗಿ ಬಾಹ್ಯ ಪ್ರಪಂಚವನ್ನು ಮರೆಯುತ್ತಾನೆ. ಆದರೆ ಧರ್ಮಪಾಲನೆಯ ಆವಶ್ಯಕತೆ ತಲೆದೋರಿದರೆ ವ್ಯವಹಾರ ಪ್ರಪಂಚಕ್ಕೂ ಮತ್ತೆ ಬರಬಲ್ಲ. ಪಾರ-ಲೌಕಿಕ ಧರ್ಮದಂತೆ ಲೌಕಿಕ ಧರ್ಮವೂ ಮುಖ್ಯ, ಎರಡೂ

ಪರಸ್ಪರಾವಲಂಬಿ ಎಂಬುದನ್ನು ಅವನು ಬಲ್ಲ. ಶಂಕರನ ತಾಯಿಯ ಗೋಳನ್ನು ಕೇಳಿದಾಗ "ಶಂಕರನಿಗಿಂತ ಶಂಕರನ ಶರಣರ ಪೂಜೆ ಮಿಗಿಲು, ತನ್ನ ಮಗನಿಂದ ಶರಣರಿಗೆ ಇಂಥ ದುಃಖ ಪ್ರಾಪ್ತವಾಯಿತೆ" ಎಂದು ಮರುಗುತ್ತಾನೆ. 'ಕೃತಾಪರಾಧಕ ಧರಾತಿಭಾರಕ ಕುಮಾರಕ' ನನ್ನು ಕರೆಸಿ ಕೆಂಪಡರ್ದ ಕಡೆಗಣ್ಣುಗಳಿಂದ ನೋಡಿ

ಇನಿತೊಂದೌದ್ಧತ್ಯಮೇಂ ಸಲ್ಲುದೆ ತನುಮುದದಿಂ ಯೌವನೋದ್ರೇಕ ಲಕ್ಷ್ಮೀ
ಜನಿತೋದ್ಯದ್ದರ್ಪದಿಂ ಮುಂದರಿಯದಪಶಯಶಕ್ಕಳ್ಕದತ್ಯಂತ ದೋಷ
ಕ್ಕೆ ನಿತಾಂತಂ ಬಳ್ಕದೆನ್ನತ್ತಣಿನಿನಿತು ಭಯಂದೋರದೀ ಧಾತ್ರಿಯೊಳ್ ಸ
ಜ್ಜನರಲ್ಲುತ್ತೆಂಬರೆಂದೆಂಬುದನೆ ಬಗೆಯದೀ ಬಾಲನಂ ಕೊಂದಿರಲ್ತೇ

ಶರಣರ ಮನಕ್ಕೆ ನೋವಂ
ದೊರೆಕೊಳಿಸಿದಘಕ್ಕೆ ದೊರೆಯುದೆನೆ ಪರಿಹಾರಂ
ಶರಣಶಿಸು ಶಿರಮನರಿದೀ
ದುರಿತಂ ನಿಜಶಿರಮನಿತ್ತೊಡಂ ಪೋದಪುದೇ

ಎಂದು ನುಡಿದು, ನಡೆದುದನ್ನು ವಿಚಾರಿಸಿ, ತನ್ನ ಮಗನಿಂದ ಈ ಅಕಾರ್ಯ ನಡೆದಿದೆಯೆಂದು ನಿರ್ಣಯಿಸಿ, ಅವನು ವಧಾರ್ಹ ಎಂದು ತೀರ್ಪು ನೀಡುತ್ತಾನೆ. ವಂಶೋದ್ಧಾರಕನಾದ ಮಗನಿಲ್ಲವೆಂದು ಹಂಬಲಿಸಿ ಕೊರಗಿ ಮರುಗಿ ಕೊನೆಗೆ ಗುರುಪ್ರಸಾದದಿಂದ ಪಡೆದ ಮಗನನ್ನು ಕೊಲ್ಲಿಸುವ ಧೈರ್ಯ ಯಾವ ತಂದೆಗಿದೆ ? ಇಲ್ಲಿ ಅವನ ಸಂಯಮ ನ್ಯಾಯನಿಷ್ಠುರತೆ ಪರಹಿತಾಸಕ್ತಿ ಮೇಲಾಗಿ ಶಿವಾನುರಕ್ತಿ ವ್ಯಕ್ತವಾಗುತ್ತವೆ. 'ನೀಮಿರ್ದೆಡೆ ಕಾಶಿಯಲ್ತೆ' ಎಂಬ ಮಂತ್ರಿಯ ಮಾತು ಸತ್ಯೇಂದ್ರಚೋಳನಿಗೆ ಸಂಪೂರ್ಣವಾಗಿ ಒಪ್ಪುತ್ತದೆ.

ಶಿವಭಕ್ತರಾದ ಸತ್ಯೇಂದ್ರಚೋಳ ಅಮೃತಮತಿಯರು ಬಯಸಿ ಹಂಬಲಿಸಿ ಶಿವನನ್ನು ಕಾಡಿ ಬೇಡಿದ ನಚ್ಚಿನ ಮಗ ರಾಜಶೇಖರ. ಹರಮಂತ್ರೋದ್ಭವನಾದುದರಿಂದ ಅವನಿಗೆ ಮಂತ್ರಲಕ್ಷನೆಂಬ ನಾಮಾಂತರವಿದೆ. ಅವನು ಹುಟ್ಟಿದಾಗ 'ಶಂಕರಂ ನಲಿದಂ; ಭೂರಮೆಯುತ್ಸವಂ ಬಡೆದಳ್; ಇಂದ್ರಾದ್ಯರ್ ಮುದಂಬಟ್ಟರ್'. ಅವನೂ ಮಂತ್ರಿ ಪುತ್ರನೂ ಅವಳಿಜವಳಿಗಳಂತೆ ಸಮಾನಚರಿತರಾಗಿ ಸಮವಿನಯರಾಗಿ ಸಮವಿದ್ಯರಾಗಿ ಸಮರೂಪರಾಗಿ ಸಮಗುಣರಾಗಿ ಬೆಳೆಯುತ್ತಾರೆ. ಗಂಭೀರ ಪಾರಾವಾರನೂ ಧೃತಿಧರಾಧರನೂ ರೂಪ ಕಂದರ್ಪನೂ ಕಲಾಭಿಜ್ಞನೂ ಶೃಂಗಾರ ಶೇಖರನೂ ಸಮರ ಷಣ್ಮುಖನೂ ಯೌವನಸಮಾರೂಢನೂ ಆದ ರಾಜಶೇಖರನಿಗೆ ತಂದೆ ಪಟ್ಟಗಟ್ಟಿದಾಗ ಧರಣೀಕಾಂತೆಗೆ ಸಂತಸವೂ, ರಿಪುಮಹೀಕಾಂತರ್ಗೆ ಸಂತಾಪವೂ ಇಂದಿರೆಗೆ ಆನಂದವೂ ಬುಧಪ್ರಕರ ದಾರಿದ್ರ್ಯಕ್ಕೆ ವಿಚ್ಛೇದವೂ ಈಶ್ವರಭಕ್ತರಿಗೆ ಸಮ್ಮುದವೂ ಆಯಿತಂತೆ. ಅವನು ತಂದೆಯಿಂದ ರಾಜದಂಡವನ್ನು ಸ್ವೀಕರಿಸಿದುದು ಅಧಿಕಾರ ಲಾಲಸೆಯಿಂದಲ್ಲ, ತಂದೆಯ ಭಾರವನ್ನಿಳಿಸಿ ತಪೋನುಕೂಲತೆಯನ್ನು ಕಲ್ಪಿಸುವ ಸಲುವಾಗಿ, ಸ್ವಕರ್ತವ್ಯ ಪರಿಪಾಲನೆಗಾಗಿ. ಸಿಂಹಳೇಂದ್ರನು ದಂಡೆತ್ತಿ ಬಂದ ಸುದ್ದಿಯನ್ನು ಕೇಳಿದಾಗ ರಾಜಶೇಖರನ ಉತ್ಸಾಹ ಗರಿಗೆದರುತ್ತದೆ; ವೀರ್ಯ ಗುಡಿಗಟ್ಟುತ್ತದೆ. ಸಮರೋತ್ಸಾಹನಾಗಿ ಮೇಲೆದ್ದ ಮಂತ್ರಿಯನ್ನು ತಡೆಗಟ್ಟಿ ತಾನೆ ಸಿಂಹಳೇಂದ್ರನ ಮೇಲೆ ಹಾಯ್ದು, ಅವನ ಗರ್ವಗಿರಿಗೆ ಪವಿಯಾಗಿ, ಪ್ರತಾಪಾರಣ್ಯಕ್ಕೆ ದಾವಾನಲನಾಗಿ ತನ್ನ ಉತ್ತುಂಗ ಶೌರ್ಯವನ್ನು ಮೆರೆದು, ಸೋತವನು ಸಂಧಿಗೆ ಸಿದ್ಧನಾಗಲು ತನ್ನ ಕ್ಷಮಾ

ಗುಣವನ್ನು ಪ್ರಕಾಶಪಡಿಸಿ, ನಿರತಿಶಯ ಸ್ವರ್ಗೀಯ ಸೌಂದರ್ಯ ದಧಿದೇವತೆಯಂತಿದ್ದ ಸಿಂಹಳೇಂದ್ರನ ಪುತ್ರಿ ಸರ್ವಮಂಗಳೆಗೆ ಸೋತು, ಅವಳನ್ನು ಮದುವೆಯಾಗಿ ರಾಜಧಾನಿಗೆ ಹಿಂದಿರುಗುತ್ತಾನೆ. ಅಷ್ಟರಲ್ಲಿ ಸಿಂಧೂದೇಶದ ರಾಜ ಎರಡು ದಿವ್ಯಾಶ್ವಗಳನ್ನು ತಂದು ದೊರೆಗೆ ಕಾಣಿಕೆಯೊಪ್ಪಿಸುತ್ತಾನೆ; ಒಂದು ಪವನಗಮನ, ಮತ್ತೊಂದು ಹರಿಣಗತಿ. ಅವು ಮುಂದಿನ ಕಥೆಯ ಗತಿಯನ್ನೆ ಬದಲಾಯಿಸುತ್ತವೆ; ಕಾವ್ಯದ ಗುರಿಯನ್ನು ತ್ವರಿತಗೊಳಿಸುತ್ತವೆ. 'ಲೇಸನ್ನು ಮಾಡುವ ವಿಧಿಗೆ ಬಹುಪಥಗಳಂತೆ!' ವಿನಯಶೀಲನೂ ಮಿತ್ರೋತ್ತಮನೂ ವಿವೇಕಿಯೂ ಆದ ರಾಜಶೇಖರ ಅಶ್ವರೂಪದ ವಿಧಿವಿಲಾಸಕ್ಕೆ ಶರಣಾಗುತ್ತಾನೆ. ಮಿತ್ರ ಮಿತವಚನನ ಮಾತಿಗೆ ಸೊಪ್ಪು ಹಾಕದೆ, ಪಳಗದ ಕುದುರೆಗಳನ್ನೇರಿ ವೈಹಾಳಿಗೆ ಹೋಗಲಣಿಯಾಗುತ್ತಾನೆ. ಸಾಹಸಾಲಂಕೃತನೂ ಧೀರೋದಾತ್ತನೂ ಶೌರ್ಯಶ್ರೀಮಂತನೂ ಆದ ರಾಜಕುಮಾರನಿಗೆ ಅಂಥ ಜಾತ್ಯಶ್ವಗಳನ್ನು ನೋಡಿದಾಗ ಕುತೂಹಲ ಕೆರಳದಿರುತ್ತದೆಯೆ? ಪರಾಕ್ರಮ ಹೆಡೆಯೆತ್ತದಿರುತ್ತದೆಯೆ? ವಿವೇಕ ಸೊರಗಿ, ಕ್ಷೈಮಿಂಚಿ, ಕಾಲು ಜಾರುತ್ತದೆ. ಈಗ ಸ್ವಕೃತಾಪರಾಧದ ಫಲವನ್ನನುಭವಿಸಲೇ ಬೇಕು; ಶಿವಶರಣನ ಕೊಲೆಗಾಗಿ ಪಶ್ಚಾತ್ತಾಪ ಪಡುತ್ತಾನೆ. ಎಂಥ ಶಿಕ್ಷೆಯನ್ನಾದರೂ ಅನುಭವಿಸಲು ಸಿದ್ಧನಾಗುತ್ತಾನೆ. ತಂದೆ ಕರೆಸಿ ಕೇಳಿದಾಗ ಅಪರಾಧವೆಲ್ಲ ತನ್ನದೆಂದು ಒಪ್ಪಿಕೊಂಡು ಮರಣದಂಡನೆಗೆ ಸಂತೋಷದಿಂದ ಸಿದ್ಧನಾಗುತ್ತಾನೆ.

ಕವಿ ಇವೆರಡು ಪಾತ್ರಗಳನ್ನು ಬೆಳೆಸಿರುವಂತೆ ಬೇರೆ ಪಾತ್ರಗಳನ್ನು ಬೆಳೆಸಿಲ್ಲ. ಮಿತವಚನ ವಯೋರೂಪಗುಣ

ಪರಾಕ್ರಮ ನಯನೀತಿಗಳಲ್ಲಿ ರಾಜಶೇಖರನಿಗೆ ಸಮಾನ; ರುಚಿ ಸಂಸ್ಕಾರಾಭಿರುಚಿಗಳಲ್ಲಿ ಇಬ್ಬರೂ ಸಮಾನಧರ್ಮಿಗಳು; ಇಬ್ಬರೂ ಒಂದೇ ಶಕ್ತಿಯ ಎರಡು ಮುಖಗಳು. ಇಬ್ಬರಿಗೂ ಅಭೇದವನ್ನು ಕಲ್ಪಿಸಿ ಚಿತ್ರಿಸಿದಂತಿದೆ. ಸಮಯವೊದಗಿದಾಗ ಮಿತವಚನ ಮಿತ್ರನಿಗೆ ವಿವೇಕ ಹೇಳಿ ತಿದ್ದಲೂ ಹಿಂಜರಿಯು ವುದಿಲ್ಲ. ಮಿತ್ರನ ಸುಖದುಃಖಗಳಲ್ಲಿ ಸದಾ ಸಮಭಾಗಿ. ತಾನು ಹೇಳಿದ ವಿವೇಕ ರಾಜಕುಮಾರನಿಗೆ ಪರಿಣಾಮಕಾರಿಯಾಗದೆ ಅಶ್ವಾರೋಹಕ್ಕೆ ಸಿದ್ಧನಾದಾಗ ತಾನೂ ತುಟಿ ಪಿಟಕ್ಕೆನ್ನದೆ ಹಿಂಬಾಲಿಸುತ್ತಾನೆ. ತನ್ನ ವಿವೇಕ ಮತ್ತು ಸ್ವಾತಂತ್ರ್ಯ ಗಳನ್ನು ಮಿತ್ರತ್ವಕ್ಕಾಗಿ ಸಮರ್ಪಿಸುತ್ತಾನೆ. ಕೊನೆಗೆ ಶಂಕರನ ಕೊಲೆಯ ಅಪರಾಧಕ್ಕೆ ತಾನೇ ಹೊಣೆ ನಿಲ್ಲುತ್ತಾನೆ. ಅಪರಾಧವ ನ್ನೊಪ್ಪಿಕೊಳ್ಳುವ ಔದಾರ್ಯದಲ್ಲಿ ಇಬ್ಬರಿಗೂ ಪೈಪೋಟಿ ನಡೆದು ರಾಜಶೇಖರ ಯಶಸ್ವಿಯಾದರೂ, ಮಿತವಚನ ಜೀವನವ ಲ್ಲಂತೊ ಮರಣದಲ್ಲಿಯೂ ಅಂತೆಯೇ ಗೆಳೆಯನನ್ನು ಹಿಂಬಾಲಿ ಸಲು ಸಿದ್ಧನಾಗುತ್ತಾನೆ. ಅಮೃತವತಿ ರೂಪು ಯೌವನ ವಯೋಗುಣ ಈಶಭಕ್ತಿಗಳಲ್ಲಿ ಪತಿಗನುರೂಪಳಾದವಳು ಮತ್ತು ಸರ್ವದಾ ಪತಿಗನುಕೂಲೆಯಾದವಳು. ಎಷ್ಟೇ ರಾಜವೈಭವ ವಿದ್ದರೂ ಸಂತಾನಶೂನ್ಯವಾದ ಬಾಳು ಅಪ್ರಯೋಜಕವೆಂದು ಸ್ತ್ರೀ ಸಹಜವಾದ ಶೋಕ ಲಜ್ಜೆಗಳಿಂದ ಪರಿಮ್ಲಾನಳಾದವಳು; ಗಂಡು ಕೂಸು ಹಡೆದಾಗ ಹಿರಿ ಹಿರಿ ಹಿಗ್ಗಿದರೂ ಸಾಕು ಮಗನನ್ನು ಔರಸ ಪುತ್ರನಿಗೆ ಸಮನಾಗಿ ಕಂಡುಕೊಂಡ ಸಾಧ್ವೀಮಣಿ. ಮಗನ ಮೇಲೆ ಅಪಾರವಾದ ಪ್ರೇಮವಿದ್ದರೂ, ಅವನು ಶಿವಶರಣ ಹನನದ ಅಪರಾಧಕ್ಕೆ ಗುರಿಯಾದಾಗ ಅವನನ್ನು ಬರಸೆಳೆದು ಬಿಗಿದಪ್ಪಿ ಮೊಗವನ್ನು ನೋಡಿ ಅಲ್ಲೆ

ಗೆಯ್ದು 'ಎನ್ನಾಳ್ದನ ಸತ್ಯಂ ಗೆಲೆ ನಿನ್ನಸುಪಂ ಭಕ್ತ ಶಿಶುಗೆ ಕಂಡು ಚಿಂತೆಯದೇಕೆನ್ನಸುವೆ' ಎಂದು ಬೀಳ್ಕೊಟ್ಟ ಭಕ್ತಿ ಶಿರೋಮಣಿ. ದುರಂತದ ಮೇಲೆ ದುರಂತವೊದಗಿದಾಗ ತಾನೂ ಖಡ್ಗವನ್ನು ಸೆಳೆದು ಆತ್ಮಹತ್ಯೋದ್ಯಮಕ್ಕೆ ಸಿದ್ಧಳಾಗಿ ಶಿವಶಿವಾಣಿಯರನ್ನು ಭೂಮಿಗೆ ಸೆಳೆತಂದ ಭಕ್ತಿನಿಧಿ ಶಿವಶರಣೆ. ಮಂತ್ರಿ ಪತಿಮೋಹಿ ಹರಭಕ್ತ, ರಾಜನೀತಿವಿದ, ಸಾತ್ತ್ವಿಕ, ಸಮದರ್ಶಿ, ನಯವಿದ, ಧೈರ್ಯನಿಧಿ; ಸರ್ವಕಾಲದಲ್ಲಿಯೂ ಸರ್ವಾವಸ್ಥೆಯಲ್ಲಿಯೂ ದೊರೆಯ ಭುಜಕ್ಕೆ ಭುಜಕೊಟ್ಟು ನಿಂತು ಪ್ರಭುಹಿತವನ್ನು ಕಾಯುವುದರ ಮೂಲಕ ಈಶ ಸೇವೆಯನ್ನು ಸಲ್ಲಿಸಿದ ಸ್ವಾಮಿನಿಷ್ಠ, ಶ್ರೀಮಂತ ಪತಿಯನ್ನೂ ಆರುಮಂದಿ ಮಕ್ಕಳನ್ನೂ ಕಳೆದುಕೊಂಡು ಹಠಾತ್ತನೆ ವಿಧವೆಯೂ ನಿರ್ಗತಿಕಳೂ ನಿರ್ಭಾಗ್ಯಳೂ ಆಗಿ, ಹೇಗೊ ಏಳನೆಯ ಬಸಿರನ್ನುಳಿಸಿಕೊಂಡು ಬೆಳೆಸಿ ಪೋಷಿಸಿ ಆ ಮಗುವಿನಲ್ಲಿ ತನ್ನ ಬಾಳಿನ ಭವ್ಯಸ್ವಪ್ನವನ್ನು ಕಾಣಲೆಳಸಿ, ಕೊನೆಗೆ ಮಗು ಆಕಸ್ಮಿಕ ಮರಣಕ್ಕೆ ತುತ್ತಾದಾಗ ಕಂಡವರೆಲ್ಲ ಅಯ್ಯೊ ಎನ್ನುವಂತೆ ಬಸಿರು ಬಡಿದುಕೊಂಡು ಗೋಳ್ಗರೆದ ಶಿವಶರಣೆ ತಿರಿಕೊಳವಿನಾಚಿ; ದೀರ್ಘ ತಪಸ್ಸಿನಿಂದ ನಿಖಿಲ ಸಿದ್ಧಿಗಳನ್ನು ಪಡೆದೂ ಮಾನಸರಲ್ಲಿ ಅನುಕಂಪೆ ಸಹಾನುಭೂತಿಗಳನ್ನಿಟ್ಟುಕೊಂಡಿದ್ದ ಚಿದ್ಘನ ಶಿವಾಚಾರ್ಯರು; ವಿಧಿ ವಿಲಾಸವೆ ಪ್ರಾಣಿರೂಪವೆತ್ತಂತಿದ್ದು ಕಥೆಗೆ ಚಾಲಕ ಶಕ್ತಿಯಂತಿರುವ ಸರ್ವಾಕರ್ಷಣೀಯವಾದ ದಿವ್ಯಾಶ್ವದ್ವಯಗಳು. ಒಂದೊಂದು ವ್ಯಕ್ತಿಯ, ಒಂದೊಂದು ಪ್ರಾಣಿಯ ಹೆಸರೂ ಸುಂದರ ಸುಭಗ ಅರ್ಥಮಯ.

ಸತ್ಯಸಂಧತೆ ನ್ಯಾಯನಿಷ್ಠುರತೆ ಪರಾನುಕಂಪೆ ನಿಷ್ಕಲ್ಮಷ ಪ್ರೇಮ ನಿರ್ವ್ಯಾಜ ಸ್ನೇಹ—ಇವು ಈ ಕಾವ್ಯದಲ್ಲಿ ನಿರೂಪಣೆ

ಗೊಂಡಿರುವ ಕಲ್ಯಾಣ ಗುಣಗಳು; ಇವೆಲ್ಲಕ್ಕಿಂತ ಮಿಗಿಲಾಗಿ ಶಿವಭಕ್ತಿ ಮತ್ತು ಪಂಚಾಕ್ಷರೀ ಮಹಿಮೆ ಇವುಗಳ ಪ್ರತಿಪಾದನೆ ಈ ಕೃತಿಯ ಪ್ರಧಾನ ಲಕ್ಷ್ಯ. ಎಲ್ಲಿಯೂ ಕಾವ್ಯಗುಣಕ್ಕೆ ಭಂಗಬರದಂತೆ, ರಸಾಭಾಸವಾಗದಂತೆ, ಪಾತ್ರಗಳ ಪೋಷಣೆ ಏರುಪೇರಾಗದಂತೆ, ತನ್ನ ಗುರಿಯನ್ನು ಸಾಧಿಸಿದ್ದಾನೆ. ಏಕ ದೇವತಾಪಾರಮ್ಯವನ್ನಾಗಲಿ ಏಕಮತೀಯ ಸರ್ವೋತ್ಕೃಷ್ಟತೆ ಯನ್ನಾಗಲಿ ಪ್ರತಿಪಾದಿಸುವಾಗ ಕಾವ್ಯ ಸಾಮಾನ್ಯವಾಗಿ ಮತೀಯ ಪ್ರಕ್ರಿಯೆಗಳ ಮತ್ತು ತತ್ತ್ವಗಳ ಸಂಕೀರ್ಣತೆಯಿಂದ ಜಟಿಲವಾಗಿ ಪೆಡಸಾಗಿ ಶುಷ್ಕವಾಗಿ ಪರಮತಾವಹೇಳನೆಯ ವಿಡಂಬನೆಯಾಗಿ ಪರಿಣಮಿಸುವುದುಂಟು. ಷಡಕ್ಷರಿ ಈ ವಿಷಯದಲ್ಲಿ ಸದಾ ಜಾಗ್ರತನಾಗಿದ್ದುಕೊಂಡು ತಪ್ಪು ಹೆಜ್ಜೆ ಇಡದೆ ಕಾವ್ಯವನ್ನು ನಿರ್ಮಿಸಿ ಆ ಮೂಲಕ ರಸ ಸಿದ್ಧಿಯನ್ನೂ ಈಶ್ವರ ಸಾಕ್ಷಾತ್ಕಾರವನ್ನೂ ಪಡೆದ ವರಕವಿ.

## ೪. ವೃಷಭೇಂದ್ರ ವಿಜಯ

ವೃಷಭೇಂದ್ರ ವಿಜಯ ಷಡಕ್ಷರದೇವ ಕನ್ನಡದಲ್ಲಿ ಬರೆದ ಗ್ರಂಥಗಳಲ್ಲಿ ಎರಡನೆಯದು; ರಾಜಶೇಖರ ವಿಳಾಸವನ್ನು ಬರೆದು ೨೨ ವರ್ಷಗಳಾದ ಮೇಲೆ ರಚಿತವಾದದ್ದು. ಶೃಂಗಾರ ರಸ ಪ್ರಪೂರ್ಣವಾದ ಕೃತಿಯನ್ನು ರಚಿಸಿದ ಕವಿಗೆ ಭಕ್ತಿ ಪ್ರಧಾನವಾದ ಮತ್ತು ಮತೀಯ ಪ್ರಕ್ರಿಯೆಗಳನ್ನೊಳಗೊಂಡ ಪುರಾಣವನ್ನು ಬರೆಯಬೇಕೆನ್ನಿಸಿರಬೇಕು. ತನ್ನ ಉದ್ದೇಶ ಸಾಧನೆಗೆ ವೀರಶೈವ ಮತೋದ್ಧಾರಕನೂ ನಂದೀಶ್ವರನ ಅವ ತಾರವೂ ಆದ ಬಸವಣ್ಣನವರ ಜೀವನ ಸರಿಯೆನಿಸಿತು. ಹಿಂದೆ ಹಲವಾರು ಕವಿಗಳು ವರ್ಣಕವಲ್ಲಿ ಹೇಳಿದ ಕತೆಯನ್ನು

ಷಡಕ್ಷರಿ ವಸ್ತುಕವಲ್ಲಿ ರಚಿಸಿ ಬಸವಣ್ಣನವರ ಜೀವನದ ಮಹತ್ತು ಬೃಹತ್ತುಗಳನ್ನು ಚಂಪೂವಿನ ಗಂಭೀರ ಶೈಲಿಯಲ್ಲಿ ವಿವರಿಸುತ್ತಾನೆ. ಪಾಲ್ಕುರಿಕೆ ಸೋಮನಾಥ ಆಂಧ್ರಭಾಷೆಯಲ್ಲಿ ರಚಿಸಿದ ಬಸವ ಪುರಾಣವನ್ನು ಭೀಮಕವಿ (೧೪ ನೆಯ ಶತಮಾನ) ಕನ್ನಡದಲ್ಲಿ "ವರ್ಣಕ ಪ್ರೌಢಿ" ಯಿಂದ ಹೇಳುತ್ತಾನೆ. ಅದನ್ನೆ ಆಧಾರವಾಗಿಟ್ಟುಕೊಂಡು ಶಂಕರಾರ್ಯ ಸಂಸ್ಕೃತದಲ್ಲಿ ಪುರಾಣವನ್ನು ರಚಿಸುತ್ತಾನೆ. ತಾನು ಅದನ್ನೆ ಕನ್ನಡದಲ್ಲಿ ಮತ್ತೆ ಹೇಳುವುದಾಗಿ ಷಡಕ್ಷರಿ ತಿಳಿಸುತ್ತಾನೆ. ಆದರೆ ಹರಿಹರೋದಿತ ಮಾರ್ಗಾನುಯಾಯಿಯಾದ ಇವನು ಬಸವಣ್ಣನವರ ಸಂಬಂಧವಾದ ಕನ್ನಡ ಕೃತಿಗಳಲ್ಲಿ ಪ್ರಪ್ರಥಮವಾದ ಬಸವರಾಜ ದೇವರಗಳೆಯ ಹೆಸರನ್ನೇ ಇಲ್ಲಿ ಪ್ರಸ್ತಾಪಿಸಿಲ್ಲ. ಅದು ಪುರಾಣದ ಮಟ್ಟಕ್ಕೇರಲಿಲ್ಲವೆಂಬ ಭಾವನೆಯಿಂದ ಕೈಬಿಟ್ಟಂತೆ ಕಾಣುತ್ತದೆ. ಪ್ರತ್ಯೇಕವಾಗಿ ಹರಡಿರುವ ಪುರಾತನ ಶರಣರ ಸಂಬಂಧವಾದ ರಗಳೆಗಳನ್ನು ಬಸವರಾಜ ದೇವರಗಳೆಯೊಡನೆ ಸಮನ್ವಯಗೊಳಿಸಿದರೆ ಅದೂ ಪುರಾಣದ ಮಟ್ಟಕ್ಕೇರಬಹುದು. ಆದರೂ ಷಡಕ್ಷರಿ ಹರಿಹರನ ರಗಳೆಗಳನ್ನು ನೋಡಿದ್ದನೆನ್ನುವುದಕ್ಕೆ ಬಾಹ್ಯಾಂತರ ನಿದರ್ಶನಗಳು ಸಾಕಷ್ಟು ಸಿಗುತ್ತವೆ.

ವೃಷಭೇಂದ್ರವಿಜಯದ ಹೆಸರಿನಲ್ಲಿ ಬಸವಣ್ಣನವರ ಕಥೆ ಸೂಚಿತವಾಗಿದ್ದರೂ ಅದರಲ್ಲಿ ಅನೇಕ ಶರಣರ ಪರಿಚಯಾತ್ಮಕವಾದ ಕಥೆಗಳು ಬರುತ್ತವೆ. ಇವರಲ್ಲಿ ಕೆಲವರು ಪುರಾತನರು, ಕೆಲವರು ಬಸವಣ್ಣನವರ ಸಮಕಾಲೀನರು. ಅಷ್ಟಾವರಣ ಷಟ್ಸ್ಥಲ ಧರ್ಮಾಧರ್ಮಸ್ವರೂಪ ಜೀವೇಶ್ವರ ವಿಚಾರ ಆಚಾರ ವ್ಯವಹಾರಾದಿ ಮತಸಂಬಂಧವಾದ ಪ್ರಕ್ರಿಯೆಗಳನ್ನು

ತತ್ತ್ವವನ್ನು ಕಥೆಗಳ ಮೂಲಕ ಸಾಮಾನ್ಯರಿಗೂ ಸುಲಭವಾಗಿ ಗ್ರಾಹ್ಯವಾಗುವಂತೆ ವಿವರಿಸಿದೆ. ಬಸವಣ್ಣನವರ ಜೀವನ ಚರಿತ್ರೆಯ ಬಹು ಸೂಕ್ಷ್ಮತಂತು ಈ ಕಥೆಗಳ ಮೂಲಕ ಹರಿದು ಒಂದು ವಿಧವಾದ ಸಮಗ್ರತೆ ಐಕ್ಯತೆ ಮತ್ತು ಅವಿಚ್ಛಿನ್ನತೆಯ ಭಾವನೆಯನ್ನು ಮೂಡಿಸಲು ಪ್ರಯತ್ನಿಸಿದೆ ಇಲ್ಲಿ ಕ್ರಿಯೆಗೆ ಪ್ರಾಧಾನ್ಯವಿಲ್ಲವಾದುದರಿಂದ ಕಥಾಸಂವಿಧಾನದಲ್ಲಿ ಜಾಣ್ಮೆಯನ್ನು ತೋರಿಸುವ ಅವಕಾಶವಿಲ್ಲ. ಕೆಲವು ಪವಾಡಗಳು ಹೊರತಾಗಿ ಬಸವಣ್ಣನವರ ಹಿರಿಯ ಬದುಕಿಗೆ ಸಂಬಂಧಿಸಿದ ಸಂಗತಿಗಳು ಸಾಕಷ್ಟಿಲ್ಲ. ಆ ಜೀವನಚರಿತ್ರೆಯೂ ಕಾಲ ಕಾಲಕ್ಕೆ ರೂಪಾಂತರಗೊಳ್ಳುತ್ತ ಬಂದಿದೆ; ಜನಮನಸ್ಸು ಬೆಳೆದಂತೆ ಅದೂ ವಿಕಾಸಗೊಂಡಿದೆ. ಷಡಕ್ಷರಿ ಹಿರಿಯ ಕವಿಗಳ ಜಾಡನ್ನು ಹಿಡಿದಿದ್ದರೂ ತನ್ನ ಕಾಲದಲ್ಲಿ ಬಸವಣ್ಣನವರ ಜೀವನ ವಿಚಾರ ಯಾವ ನಿಲುಮೆಗೆ ಬಂದಿತ್ತೊ ಅವನ್ನು ದೃಷ್ಟಿಯಲ್ಲಿಟ್ಟುಕೊಂಡಿದ್ದಾನೆ.

ಮೊದಲಿಂದಲೂ ಕವಿಗಳು ಬಸವಣ್ಣನವರ ಜೀವನದ ಒಂದು ಮುಖವನ್ನು ಮಾತ್ರ ವಿವರವಾಗಿ ಕಂಡುಕೊಂಡು ಮತ್ತೊಂದರ ಕಡೆಗೆ ಹೆಚ್ಚು ಗಮನಕೊಟ್ಟಹಾಗೆ ಕಾಣುವುದಿಲ್ಲ. ಬಸವಣ್ಣನವರು ಪ್ರಥಮತಃ ಶರಣರು; ವೀರಶೈವ ಮತದ ಉದ್ಧಾರಕ್ಕಾಗಿ ಸಂಕಲ್ಪತೊಟ್ಟ, ಆ ಮಹತ್ಕಾರ್ಯವನ್ನು ಸಾಧಿಸುವುದಕ್ಕಾಗಿ ತಪೋಬಲ ಧನಬಲ ಜನಬಲಗಳನ್ನು ಕೂಡಿಸಿ ಕೃತಸಿದ್ಧರಾದ ಮಹಾಮಹಿಮರು; ತಮ್ಮ ಜೀವನದ ಆ ಏಕೈಕ ಗುರಿಯನ್ನು ಯಶಸ್ವಿಯಾಗಿ ಸಾಧಿಸಿ, ಆ ಮೂಲಕ ಶಿವಸಾಯುಜ್ಯವನ್ನು ಪಡೆದ ಅವತಾರಪುರುಷರು. ಆದುದರಿಂದ ವೀರಶೈವ ಮತದ ಸಂಘಟನಾಕಾರ್ಯದೊಡನೆ ಅವರ ಜೀವನ ಹಾಸುಹೊಕ್ಕಾಗಿ

ಹೆಣೆದುಕೊಂಡಿದೆ. ಅಷ್ಟೇ ಅಲ್ಲ, ಶರಣರ ಬಾಳಿನೊಡನೆ ಅವರ ಬಾಳೂ ಅವಿನಾಭಾವದಿಂದ ಲೀನವಾಗಿದೆಯೆಂದೂ ಹೇಳ ಬಹುದು. ಎಲ್ಲ ಆದರ್ಶ ಮಾನವರಂತೆ ಅವರ ಜೀವನವೂ ಕ್ಲೇಶಕಷ್ಟಗಳ ಮೂಷೆಯಲ್ಲಿ ಬೆಂದು ಕಾಳಿಕೆಯನ್ನು ಕಳೆದು ಕೊಂಡು ಮಹೋಜ್ಜ್ವಲವಾಗಿದೆ. ಅವರು ಮಂತ್ರಿಯಾ ಗಿದ್ದಾಗ ಲೋಕೋಪಯೋಗವಾದ ಅನೇಕ ಕಾರ್ಯಗಳನ್ನು ಮಾಡಿರಬೇಕು. ಇವುಗಳ ವಿವರಣೆ ಅವರ ಜೀವನ ಚರಿತ್ರೆಯ ಲ್ಲೆಲ್ಲಿಯೂ ಸಿಗುವುದಿಲ್ಲ; ಒಂದೆರಡು ಕಡೆ ಮಾತ್ರ ಸೂಚ್ಯವಾಗಿ ಕಾಣುತ್ತವೆ.

ವೃಷಭೇಂದ್ರವಿಜಯದ ಕಥೆ ಹೀಗಿದೆ: ಬಾಗೆವಾಡಿಯಲ್ಲಿ ಮಂಡಗೆಯ ಮಾದರಸನೆಂಬ ಶೈವಬ್ರಾಹ್ಮಣ ತನ್ನ ಹೆಂಡತಿ ಮಾದಲಾಂಬಿಕೆಯೊಡನೆ ಹರಸಂಕೀರ್ತನೆ ಮತ್ತು ಸಮರ್ಚನೆ ಗಳಲ್ಲಿ ತಲ್ಲೀನನಾಗಿದ್ದನು. ಒಮ್ಮೆ ಮಾರ್ಕಂಡೇಯ ಶಿಲಾದಾದಿ ಚರಿತ್ರೆಗಳನ್ನು ಕೇಳಿದ ಮಾದಲಾಂಬಿಕೆ ತನಗೆ ಮಕ್ಕಳಿಲ್ಲದು ದನ್ನು ನೆನೆದು ಹಂಬಲಿಸಿ ಬಿಸುಸುಯ್ದಳು. ಅನಂತರ ನಂದಿಕೇಶ್ವರ ಜನ್ಮಧಾರಣೆ ಮಾಡಿದಾಗ ಸಚರಾಚರ ವಸ್ತು ಗಳೆಲ್ಲ ರೋಮಾಂಚಗೊಂಡುವು. ಕಪ್ಪಡಿಯ ಸಂಗಮೇಶ್ವರ ತಾನೇ ಬಂದು ಮಗುವಿನ ಹಣೆಯಲ್ಲಿ ವಿಭೂತಿಯನ್ನಿಟ್ಟು, ಕರ್ಣದಲ್ಲಿ ಮೂಲಮಂತ್ರವನ್ನು ತಿಳಿಸಿ, ಶಿವದೀಕ್ಷೆಯನ್ನು ಕೊಟ್ಟು ಹೋದನು. ಮಗುವಿಗೆ ಅಷ್ಟಾಬ್ದ ಸಂಪ್ರಾಪ್ತ ವಾದಾಗ ಮೌಹೂರ್ತಿಕರನ್ನು ಕರೆಸಿ ಉಪನಯನ ಮಾಡಿಸ ಬೇಕೆಂದು ತಂದೆ ಆಲೋಚಿಸಿದನು. ಅದನ್ನರಿತ ಬಸವರಾಜ ಮುಗುಳ್ನಗೆ ನಕ್ಕು "ಎಲೈ ತಾತ, ಮೂಢ ಜನರೊಡನಾಡಿ ನೀನೂ ಮೂಢತೆಗೆ ಪಕ್ಕಾದೆ; ಸುರಗಂಗೆಯನುಳಿದು ಮರೀ

ಚಿಕೆಯನ್ನಿಂಟಲೆಳಸುವುದೆ? ಹರದೀಕ್ಷೆಯಾಂತ ಮಹಿಮಂ ಪರದೀಕ್ಷೆಯನಾಸೆಗೆಯ್ವನೆ? ”

ಒಡಲುಪವಾಸದ ಪೆರ್ಚಿಂ
ದಡರ್ದುದೊ ಘನಸೈತ್ಯಮಕಟ ನಿನ್ನಯ ಶಿರಮಂ
ಮೃಡನೆನಗೆಸಗಿದ ದೀಕ್ಷೆಯ
ನೆಡೆಯೊಳ್ಮರೆದೀಗಳೇನನಾಲೋಚಿಸಿದೈ

ಎಂದು ನುಡಿದನು. ತಂದೆ ಮನನೊಂದು “ ಮಗನೆ ಹಿರಿಯರೆಲ್ಲರ್ನಡೆದ ನಡೆವಳಿಯನೊಲ್ಲೆನೆಂಬುದು ಬಲ್ಲತನವಲ್ತು; ವರ್ಣಾಶ್ರಮಕ್ರಮದಿನಿರ್ದು ವೈದಿಕಶಿವಭಕ್ತಿಯನೇಕಂಗೆಯ್ದಾಚರಿಸಿ ಶಿವಕೃಪೆಯ ಪಡೆಯಲಕ್ಕು ” ಎಂದು ಕೇಳಿಕೊಂಡನು. ಮಗ ಆ ಮಾತಿನಿಂದ ತೃಪ್ತನಾಗದೆ ಉಪನಯನಾದಿ ವೈದಿಕ ವಿಧಿವಿಧಾನಗಳನ್ನು ಧಿಕ್ಕರಿಸಿ “ ಶಿವಪಂಚವರ್ಣಮಿರೆ ಬೇರೆ ವರ್ಣವೇಕೆ? ಶಂಭುಪಾದಾಶ್ರಯಮೊಂದವಿರತಮಿರೆ ಮಿಕ್ಕಾಶ್ರಮವೇಕೆ? ಲಿಂಗಪೂಜೆಯೆ ಯಜ್ಞ; ಅಷ್ಟೇ ಅಲ್ಲ,

ಎನಗೆ ಪಿತಂ ಮಹೇಶನಗಜಾತೆಯೆ ಮಾತೆ ಶಿವೈಕಭಕ್ತಿ ಸಂ
ಜನಿತ ಮಹಾಸುಖಾನುಭವರೆನ್ನಯ ಬಾಂಧವರಿಂದುಮೌಳಿ ಲಾಂ
ಛನಧರರೆನ್ನನಾಳ್ವಿಸಕೆ ನೇಮಿಸುವಾಣ್ಮರುಮೇಶ್ವರಾಂಘ್ರಿ ಸೇ
ವನಮಸಮಾನ ಭಾಗ್ಯಮುಮರ್ಧೀಶ್ವರಭಕ್ತಿಯೆ ಮುಕ್ತಿಸಂಪದಂ

ಎಂದು ತಂದೆತಾಯಿಯರಿಗೆ ಸಮಾಧಾನ ಹೇಳಿ, ನಿಜಸಹೋದರಿ ನಾಗಲಾಂಬಿಯೊಡನೆ ಕಪ್ಪಡಿಗೆ ಹೊರಟನು. ದೂರದಿಂದಲೆ ಸಂಗಮೇಶ್ವರ ಗೃಹವನ್ನು ಕಂಡು ರೋಮಾಂಚಿತಗಾತ್ರನಾಗಿ ಧ್ಯಾನಪಾರಾಯಣನಾಗಲು ಈಶ್ವರ ಗುರುರೂಪವನ್ನು ತಾಳಿ ಮೈದೋರಿ ಉಪದೇಶಿಸಿ ಹರಸಿದನು. ಬಸವೇಶ್ವರ ಆ

ಉಪದೇಶವನ್ನು ಮತ್ತೆ ಮತ್ತೆ ನೆನೆಯುತ್ತ ತಪೋನಿರತ ನಾದನು.

ಮಾದಲಾಂಬಿಕೆಯ ತಮ್ಮನೂ ಕಲ್ಯಾಣದ ದೊರೆ ಬಿಜ್ಜಳನ ಮಂತ್ರಿಯೂ ಶಿವಭಕ್ತನೂ ಆದ ಬಲದೇವ ತನ್ನ ಮಗಳು ಗಂಗಾಂಬಿಕೆಗೆ ಯೌವನ ಪ್ರಾಪ್ತವಾದುದನ್ನು ನೋಡಿ, ಈಕೆಯ ಸೌಂದರ್ಯ ಸೌಶೀಲ್ಯಕ್ಕೆ ತಕ್ಕ ವರನಾವನೆಂದು ನಿಜ ಮನೋಹರಿಯೊಡನೆ ಯೋಚಿಸುತ್ತಿರುವಲ್ಲಿ ಬಸವೇಶ್ವರನ ನೆನಪು ಬಂದಿತು. ಅವನೇ ಕಪ್ಪಡಿಗೆ ಹೋಗಿ ಬಸವೇಶ್ವರನ ಸಮ್ಮತಿಯನ್ನು ಪಡೆದುಕೊಂಡು ವಿವಾಹವನ್ನು ನೆರವೇರಿಸಿದನು. ಕೆಲವು ದಿನಗಳಲ್ಲಿ ಬಲದೇವ ಶಿವಸಾಯುಜ್ಯವನ್ನು ಪಡೆಯಲು, ಬಿಜ್ಜಳ ಬಸವೇಶ್ವರನನ್ನು ಕಪ್ಪಡಿಯಿಂದ ಕರೆಸಿ, ಅವನನ್ನು ಮಾವನ ಸ್ಥಾನದಲ್ಲಿ ನಿಲ್ಲಿಸಿದನು. ಒಡ್ಡೋಲಗದಲ್ಲಿ ಬಿದ್ದ ಹರಲಿಖಿತವನ್ನು ಯಾರೂ ಓದಲಾರದಿರಲು ಬಸವೇಶ್ವರ ತಾನೇ ಓದಿ ಬಿಜ್ಜಳನ ಗೌರವಾದರಗಳಿಗೆ ಪಾತ್ರನಾಗಿ, ನಾಡಿನ ಸೂತ್ರಧಾರಿಯಾದನು. ಬಸವಣ್ಣನವರ ಭಕ್ತಿ ವೈಭವವನ್ನೂ ಅವನ ಜಂಗಮಾರ್ಚನೆಯ ಔದಾರ್ಯವನ್ನೂ ಕೇಳಿ ನಾನಾ ಭಾಗದ ಶಿವಶರಣರು ಕಲ್ಯಾಣವನ್ನು ಸೇರಿದರು. ಪ್ರತಿನಿತ್ಯವೂ ಅನೇಕ ಲಕ್ಷ ಜನರಿಗೆ ಆರೋಗಣೆ ನಡೆಯುತ್ತಿತ್ತು. ಅಸೂಯಾಪರರೂ ಅಸಹಿಷ್ಣುಗಳೂ ಆದ ಪರಮತೀಯರು ಭಂಡಾರ ಸೂರೆಯಾಯಿತೆಂದು ದೊರೆಗೆ ದೂರಿತ್ತರು. ದೊರೆ ಬಂದು ನೋಡಿದಾಗ ಹೊನ್ನು ಇರಬೇಕಾದುದಕ್ಕಿಂತ ಅಧಿಕವಾಗಿದ್ದುದನ್ನು ನೋಡಿ ಬಸವಣ್ಣನವರ ಕ್ಷಮಾಪಣೆ ಬೇಡಿದನು.

ಇಲ್ಲಿಂದ ಮುಂದೆ ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ ಸಂಗತಿಗಳು ತೀರ ವಿರಳ. ಕೃತಕ ವೇಷದ ಶಿವಶರಣರ

ಕೊರಳಿನಲ್ಲಿ ನಿಜವಾಗಿಯೂ ಲಿಂಗ ಕಂಡ ಪ್ರಸಂಗ, ದ್ರೌಪದಿಯ ಪ್ರಕರಣವನ್ನು ತುಸು ನೆನಪಿಗೆ ತರುವ ಗಂಗಾಂಬಿಕೆಯ ಸೀರೆ ಅಕ್ಷಯವಾದ ಪ್ರಕರಣ–ಮೊದಲಾದ ಪವಾಡಗಳು ಅಲ್ಲಲ್ಲೆ ಬರುತ್ತವೆ. ಶಿವಾಚಾರ ಶಿವತತ್ತ್ವಗಳಿಗೆ ಸಂಬಂಧಪಟ್ಟಂತೆ ಚರ್ಚೆ ಜಿಜ್ಞಾಸೆಗಳು ಶರಣರ ಗೋಷ್ಠಿಯಲ್ಲಿ ನಡೆಯುತ್ತವೆ. ಅಲ್ಲಿ ಚೆನ್ನಬಸವ, ಅಲ್ಲಮಪ್ರಭು, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಶರಣ ಶರಣೆಯರು ಭಾಗವಹಿಸುತ್ತಾರೆ. ಬಸವೇಶ್ವರ ವೀರಶೈವ ಸಮಾಜದ ಕೇಂದ್ರಸ್ಥಾನದಲ್ಲಿ ನಿಂತು, ಅದರ ಸಂಘಟನೆಯ ಸಂಕಲ್ಪವನ್ನು ಹೊತ್ತು, ಅದಕ್ಕೆ ಸಂಬಂಧಿಸಿದ ಎಲ್ಲ ವ್ಯವಸ್ಥೆಗೇಗೂ ತಾನೆ ಮೇಟಿಯಾಗಿ, ಶಿವಶರಣರ ನಾಡಿಯಾಗಿ ಲೋಕಸಂಗ್ರಹ ಕಾರ್ಯವನ್ನು ನೆರವೇರಿಸುತ್ತಾನೆ. ಕೊನೆಗೂ ಬಸವೇಶ್ವರನ ಮಹತ್ವನರಿಯದ ಬಿಜ್ಜಳ ಚಾಡಿಕೋರರ ಮಾತುಕೇಳಿ ಅಲ್ಲಯ್ಯ ಮಧುವಯ್ಯರೆಂಬ ಶಿವಶರಣರ ಕಣ್ಣು ಕೀಳಿಸಿದಾಗ, ಕಲ್ಯಾಣದ ವಾಸ ರೋಸಿಹೋಗಿ, ಶಿವಗಣಗಳೊಡಗೂಡಿ ಕಪ್ಪಡಿಗೆ ಹೋಗಿ, ಸಂಗಮೇಶ್ವರನಲ್ಲಿ ಐಕ್ಯವಾಗುತ್ತಾನೆ. ಶಿವಶರಣರಿಗೆ ಅನ್ಯಾಯವೊದಗಿದಾಗ ದ್ರೋಹಿಗಳನ್ನು ನಾಶಮಾಡುವುದಾಗಿ ಪ್ರತಿಜ್ಞೆಮಾಡಿದ್ದ ಜಗದೇವ ಮಾಚಯ್ಯ ಚೌಡಯ್ಯಾದಿ ಶರಣರ ಆಜ್ಞೆಯ ಮೇರೆಗೆ ಬಿಜ್ಜಳನನ್ನು ಕೊಲೆಮಾಡುತ್ತಾನೆ.

ಇದು ಮುಖ್ಯ ಕಥೆ. ಇಲ್ಲಿ ಕಥೆಗಿಂತ ಕಥಾನಕಗಳೇ ಹೆಚ್ಚು. ವೃಷಭೇಂದ್ರ ವಿಜಯವನ್ನು ಈ ಕಥಾನಕಗಳಿಗಾಗಿಯಾದರೂ ಓದಬೇಕು. ಅಲ್ಲಲ್ಲೆ ಅತಿ ಮಾನುಷವಾದ ಸಂಗತಿಗಳು ತಲೆದೋರಿದರೂ, ಕೆಲವು ಕಥೆಗಳಲ್ಲಿ ಮಾನ

ವೀಯತೆ ಪರಾಕಾಷ್ಠೆಯನ್ನು ಮುಟ್ಟಿದೆ. ಒಂದೊಂದು ತತ್ತ್ವಕ್ಕೆ ಒಂದೊಂದು ನೀತಿಗೆ ಒಂದೊಂದು ಕಥೆಯಿದೆ. ಆಧುನಿಕ ಸಣ್ಣ ಕಥೆಯ ಪ್ರಧಾನ ಲಕ್ಷಣವಾದ ಐಕ್ಯತ್ರಯ ವನ್ನು, ಅಂತ್ಯ ಪರಿಣಾಮವನ್ನು ಕೆಲವು ಕಥೆಗಳಲ್ಲಿ ಗಮನಿಸ ಬಹುದು. ಜಗತ್ತಿಗೆ ವೀರಶೈವ ಮತದ ಶ್ರೇಷ್ಠವಾದ ಕೊಡುಗೆ ಎಂದರೆ ಕಾಯಕ ತತ್ತ್ವ. ಇದನ್ನು ವಿವರಿಸುವ ಕಥೆಗಳು ಕೆಲವಿವೆ. ನಿದರ್ಶನಾರ್ಥವಾಗಿ ಕೆಳಗೆ ಒಂದೆರಡನ್ನು ಮಾತ್ರ ಸಂಗ್ರಹಿಸಿದೆ.

**ಮುಗ್ಧ ಸಂಗಯ್ಯನ ಕಥೆ :** ಕಲ್ಯಾಣದಲ್ಲಿ ಮುಗ್ಧ ಸಂಗಯ್ಯನೆಂಬ ಮಹಾತ್ಮ ಸರ್ವೇಂದ್ರಿಯ ಲಿಂಗಯುತನಾಗಿ ದುರ್ವಿಷಯ ವಿದೂರನಾಗಿ ಶಿವಾರಾಧನೆಯಲ್ಲಿ ಕಾಲ ಕಳೆಯು ತ್ತಿದ್ದನು. ಕುಸುಮಾಲೇಪನಗಳನ್ನು ಧರಿಸಿ ತಾಂಬೂಲಾದಿ ಗಳನ್ನು ಮೆದ್ದು ಸೂಳೆಗೇರಿಗೆ ಹೋಗುವ ವಿಟರನ್ನು ನೋಡಿ ಅದು ಶೂಲಿಪೂಜೆಯ ರೀತಿಯೆಂದು ಬಗೆದು, ಸೂಳೆಗೇರಿಗೆ ತನ್ನನ್ನು ಕಳಿಸಿಕೊಡುವಂತೆ ಬಸವಣ್ಣನವರನ್ನು ಕೇಳಿ ಕೊಂಡನು. ಅವನನ್ನು ಬಸವಣ್ಣ ಸುಗಂಧ ಮಾಲ್ಯ ಭೂಷಣ ರುಚಿರಾಚ್ಛಾದನಗಳಿಂದ ತಾನೆ ಸಿಂಗರಿಸಿ ಕಳಿಸಿಕೊಟ್ಟನು. ಸಂಗಯ್ಯ ಗಣಿಕಾವಾಟವನ್ನು ಹೊಕ್ಕು ಮಣಿಮಯ ಮಂದಿ ರದ ಬಂಧುರಾಂಗಣವನ್ನು ಪ್ರವೇಶಿಸಿ, ಸರ್ವಾಲಂಕಾರ ಮಂಡಿ ತವೂ ಸಕಲಭೋಗ ಪರಿಕರೋಪೇತವೂ ಆದ ಕಾಂಚನ ಮಂಚದ ಮೇಲೆ ಕುಳಿತು, ಕುಸುಮಾಯುಧನ ಕೂರಸಿಯಂತೆ ನಿಂತಿದ್ದ ಪಣ್ಯಾಂಗನೆಯನ್ನು ಕುರಿತು "ಎಲೆ ಭಕ್ತೆ, ನಿನ್ನ ಮೈಯ ಭಸಿತಾನುಲೇಪನವೆಲ್ಲಿ? ಕೊರಳ ರುದ್ರಾಕ್ಷಿಯೆಲ್ಲಿ? ತಲೆಯ ಜಟೆಯಲ್ಲಿ?" ಎಂದು ಕೇಳಿದನು. ಆ ವಿದಗ್ಧೆ

ಸಂಗನ ಮುಗ್ಧೋಕ್ತಿಗೆ ಮಂದಸ್ಮಿತೆಯಾಗಿ "ದ್ವೀಪಾಂತರ ದಿಂದ ತಂದ ಹಳದಿಯ ಬಣ್ಣದ ಭಸಿತವನ್ನು ಲೇಪಿಸಿಕೊಂಡಿ ದ್ದೇನೆ; ಕ್ಷೀರಾಂಬೋಧಿಯಲ್ಲಿ ಸಿಕ್ಕಿದ ನುಣ್ಣನೆಯ ಬಿಳಿಯ ರುದ್ರಾಕ್ಷಿಹಾರವನ್ನು ಧರಿಸಿದ್ದೇನೆ; ಬೆನ್ನಮೇಲೆ ನೇತಾಡುತ್ತಿ ರುವ ಜಡೆಯನ್ನು ನೋಡು; ಭವಿದೃಷ್ಟಿಪಾತವಾಗದ ಹಾಗೆ ಕೌಪೀನದಿಂದ ಸರ್ವಾಂಗವನ್ನು ಮುಚ್ಚಿದ್ದೇನೆ; ಶಿವಲಾಂಛನ ಧಾರಣರಾದ ಜಂಗಮರ ಸೇವಾರತಿಯಲ್ಲಿ ಸದಾನುರಕ್ತೆಯಾಗಿ ದ್ದೇನೆ." ಎಂದು ಅರಿಸಿನ ಮುಕ್ತಾಹಾರ ನೀಲವೇಣಿ ಮತ್ತು ಪಟ್ಟೆಯ ಸೀರೆಗಳನ್ನು ತೋರಿದಳು. ಸಂಗಯ್ಯ ಅದನ್ನೆಲ್ಲ ಕೇಳಿ ನೋಡಿ ಸಾಶ್ಚರ್ಯನಾಗಿ ಶಿವಪೂಜಾಸಕ್ತಿ ಯನ್ನು ವ್ಯಕ್ತಪಡಿಸಿದನು. ಬಂದ ಅತಿಥಿಗಳನ್ನು ಅವರ ರುಚಿಯರಿತು ಮನವರಿತು ಸಂತೋಷಪಡಿಸುವುದೇ ತನ್ನ ಕರ್ತವ್ಯವೆಂದರಿತ ವಾರಾಂಗನೆ ಶಿವಪೂಜಾ ಸಾಮಗ್ರಿಯನ್ನು ಸಿದ್ಧಪಡಿಸಿದಳು. ಬೆಳಗಿನ ತನಕ ಅವನು ಶಿವಪೂಜೆಯನ್ನು ಮಾಡಿ ಸಂಭ್ರಮಾನ್ವಿತನಾಗಿ ಬಸವೇಶ್ವರನ ಬಳಿಗೆ ಬಂದು ಕಂಡುದನ್ನೆಲ್ಲ ಕಂಡಂತೆ ಮಾಡಿದುದನ್ನೆಲ್ಲ ಪ್ರತ್ಯಕ್ಷವಾಗು ವಂತೆ ವಿವರಿಸಿ, ಸೂಳೆಗೆಯ್ತವನ್ನು ಶ್ಲಾಘಿಸಿದನು. ಅವನ ಮುಗ್ಧತೆಗೆ ಬೆರಗಾದ ಬಸವಣ್ಣ ಅವನ ನಿಷ್ಕಲ ಭಕ್ತಿಯನ್ನೂ ನಿಷ್ಕಪಟವರ್ತನೆಯನ್ನೂ ಕೊಂಡಾಡಿದನು.

**ಬಿಜ್ಜ ಮಹಾದೇವಿಯ ಕಥೆ :** ಬಿಜ್ಜ ಮಹಾದೇವಿ ಯೆಂಬ ಮುಗ್ಧಭಕ್ತೆ ಒಮ್ಮೆ ಈಶ್ವರನ ತಬ್ಬಲಿತನವನ್ನು ಕುರಿತು ತುಂಬ ಮರುಗಿದಳು. ಈಶ್ವರನಿಗೆ ಜನನಿಯಿಲ್ಲ; ಪ್ರೇತಾವಾಸವೆ ಅವನ ನಿವಾಸ, ಜಡೆಗಟ್ಟಿದ ಶಿರ, ಕೆಂಪಡ ರ್ದಕ್ಷಿ, ಘೂಳಿವಡೆದಂಗ, ಒಣಗಿದ ಮೆಯ್–ಇದು ಅವನ

ರೂಪ. ತಾಯಿದ್ದರೆ ಮಗನ ತಲೆಮೇಲೆ ಸರ್ಪಗಳಿರುವುದನ್ನು ಸಹಿಸುತ್ತಿದ್ದಳೆ? ತಿರಿದುಂಡು ಬಾಳುವುದನ್ನು ತಪ್ಪಿಸುತ್ತಿರಲಿಲ್ಲವೆ? ಆನೆ ಹುಲಿಗಳ ಚರ್ಮ ಧರಿಸಲು ಬಿಡುತ್ತಿದ್ದಳೆ? ಮನೆವಾರ್ತೆಯನ್ನೆ ಅಂಟಿಸಿಕೊಳ್ಳದೆ ಸದಾ ತೊಡೆ ಜಡೆಗಳಲ್ಲಿ ಹೆಂಡತಿಯರಿರಲು ಅವಕಾಶಕೊಡುತ್ತಿದ್ದಳೆ? ಅಂದು ಪಾರ್ಥ ಶಿವನನ್ನು ಕಾಲಿಂದ ಒದೆದ; ಬೇಡ ಬಿರುಗಲ್ಲುಗಳಿಂದ ಹೊಡೆದ. ತಾಯಿದ್ದರೆ ಸುಮ್ಮನಿರುತ್ತಿದ್ದಳೆ? ಹೀಗೆಂದು ಹಲುಬಿ ಈ ದೇಸಿಗನಿಗೆ ತಾನೆ ತಾಯಾಗಿ ರಕ್ಷಿಸುತ್ತೇನೆಂದು, ಲಿಂಗವನ್ನೆ ಶಿಶುವೆಂದು ನಂಬಿ, ತೊಡೆಯಲ್ಲಿಟ್ಟುಕೊಂಡು ಲಲ್ಲೈಸುತ್ತಿದ್ದಳು. ಲಿಂಗವೆ ಶಿಶುವಾಗಿ ಬಾಲಲೀಲೆಯಿಂದ ತಾಯಿಯನ್ನು ಸಂತೋಷಪಡಿಸುತ್ತಿತ್ತು; ಮಗುವನ್ನು ತೊಟ್ಟಿಲಲ್ಲಿಟ್ಟು ಜೋ ಜೋ ಎಂದು ಹಾಡಿ ತೂಗಿ ಮಲಗಿಸುತ್ತಿದ್ದಳು. ಒಂದು ದಿನ ಆ ಶಿಶುರೂಪದ ಈಶ್ವರ ಅವಳ ಮಹಿಮೆಯನ್ನು ಪ್ರಕಟಿಸಬೇಕೆಂದು ಕಣ್ಣು ಮುಖ ಬೆರೆತುಕೊಂಡಂತೆ, ಕೈಕಾಲು ತಣ್ಣಗಾದಂತೆ, ಹೊಟ್ಟೆ ಉಬ್ಬರಿಸಿದಂತೆ, ಮೊಲೆಯೊಲ್ಲದೆ, ಚಲನೆಯುಡುಗಿ ಮಲಗಿದನು. ದುರಂತಾವಸ್ಥೆಯಲ್ಲಿದ್ದ ಶಿಶುವನ್ನು ತಾಯಿ ನೋಡಿದ ಕೂಡಲೆ ಎದೆ ಹಾರಿತು, ಗಡಗಡನೆ ನಡುಗಿದಳು; ಬೆವತಳು, ಬಾಯಿ ಬಡಿದುಕೊಂಡು ಹೊಟ್ಟೆ ಮೋದಿಕೊಂಡು ಗೋಳ್ಗರೆದಳು. ತನ್ನ ಶಕ್ತಿಯನ್ನೆಲ್ಲ ವಿನಿಯೋಗಿಸಿ ಸಕಲೌಷಧಿಗಳನ್ನು ಮಾಡಿಯಾಯಿತು. ಆದರೂ ಗುಣವಾಗಲಿಲ್ಲ. ರುಜೆಯಡಸಿ ನರಳುತ್ತಿರುವ ಮಗುವನ್ನು ನೋಡುವುದಕ್ಕಿಂತ ಮರಣವೇ ಲೇಸೆಂದು ಕರವಾಳವನ್ನು ತೆಗೆದು ಕೊರಳಿಗಿಟ್ಟಳು. ಒಡನೆಯೆ ಚಂದ್ರಚೂಡ ನಿಜಾಕಾರದಿಂದ ಬಿಜ್ಜ ಮಹಾದೇವಿಗೆ ಕಾಣಿಸಿಕೊಂಡು, ವರ ಏನು

ಬೇಕೆಂದು ಅವಳನ್ನು ಕೇಳಿದನು. "ನೀನು ಅರುಜನಾಗಿ ಸುಖವಾಗಿದ್ದರೆ ಅದೇ ನನಗೆ ಕೋಟಿ ವರ" ಎಂದು ಅವಳು ಉತ್ತರವಿತ್ತಳು. ಆಗ ಈಶ್ವರ ಅವಳನ್ನಪ್ಪಿಕೊಂಡು "ನಿನ್ನಂಥ ತಾಯಿಯರಿರುವಾಗ ಈ ತನುವಿಗೆ ರುಜೆಯೆಲ್ಲಿಯದು ?" ಎಂದು ಹೇಳಿ ಅಂತರ್ಧಾನನಾದನು.

**ಮೋಳಿಗೆ ಮಾರಯ್ಯನ ಕಥೆ :** ಕಲ್ಯಾಣದಲ್ಲಿ ಮೋಳಿಗೆ ಮಾರಯ್ಯನೆಂಬ ಶಿವಶರಣ ಪ್ರತಿನಿತ್ಯ ಕಾಡಿಗೆ ಹೋಗಿ ಕಟ್ಟಿಗೆ ಕಡಿದುತಂದು ಮಾರಿ, ಬಂದ ಹಣದಿಂದ ಜಂಗಮರಿಗೂ ಇಕ್ಕಿ ತಾನೂ ಹೊಟ್ಟೆಹೊರೆಯುತ್ತಿದ್ದನು. ಬಸವಣ್ಣನವರ ಮನೆಯಲ್ಲಿ ಜಂಗಮರು ದಿವ್ಯಭೋಜನವುಂಡು ಸಂತೃಪ್ತಿಯಾಗದೆ ಮಾರಯ್ಯನ ಮನೆಗೆ ಹೋಗಿ ಅಂಬಲಿಯುಂಡು ತಣಿಯುತ್ತಿದ್ದರು. ಈ ಸಂಗತಿಯನ್ನು ಕೇಳಿದ ಬಸವಣ್ಣ ವೇಷ ಮರೆಸಿಕೊಂಡು ಮಾರಯ್ಯನಿಲ್ಲದಾಗ ಅವನ ಮನೆಗೆ ಹೋಗಿ ತಾನೂ ಉಂಡು ತಣಿದು, ಮಾರಯ್ಯನ ಭಕ್ತಿಗೆ ಮಾರುಹೋಗಿ, ಎರಡು ಚಿನ್ನದ ತಟ್ಟೆಗಳನ್ನು ಬಚ್ಚಿಟ್ಟು ಹೊರಗೆ ಬಂದನು. ಮಾರಯ್ಯ ಮನೆಗೆ ಹಿಂದಿರುಗಿ ಶಿವಲಿಂಗಮೂರ್ತಿಯ ಬಳಿಯಿದ್ದ ತಟ್ಟೆಗಳನ್ನು ಕಂಡು, ಅವೆಲ್ಲಿಯವೆಂದು ಹೆಂಡತಿಯನ್ನು ಕೇಳಿದನು. ನಡೆದ ವೃತ್ತಾಂತವನ್ನು ತಿಳಿದು, ಅವೆಲ್ಲ ಬಸವಣ್ಣನ ಕಾರ್ಯವೆಂದು ನಿರ್ಣಯಿಸಿ, ಕಾಷ್ಠವ್ರತದ ತನಗೆ ಚಿನ್ನದ ತಟ್ಟೆಗಳೇಕೆಂದು ಅವುಗಳನ್ನು ಜಂಗಮರಿಗೆ ಸಮರ್ಪಿಸಿದನು. ಇದನ್ನು ಕೇಳಿದ ಬಸವಣ್ಣ ಭಯದಿಂದ ಓಡಿಬಂದು ಮಾರಯ್ಯನನ್ನು ಸ್ತುತಿಸಿ ಕ್ಷಮಾಪಣೆಯನ್ನು ಬೇಡಿದನು.

ಮೇಲಣ ಮೂರು ಕಥೆಗಳಲ್ಲಿ ಮುಗ್ಧಭಕ್ತಿಯ ಮತ್ತು ಕಾಯಕ ವ್ರತದ ಮಹಿಮೆ ಪ್ರತಿಪಾದಿತವಾಗಿದೆ. ಹೀಗೆಯೆ

ಕೋಳೂರು ಕೊಡಗೂಸು, ಬೇಡರ ಕಣ್ಣಪ್ಪ, ಮಡಿವಾಳ ಮಾಚಯ್ಯ, ಮಲ್ಹಣ, ಕೆಂಭಾವಿ ಭೋಗಾರ್ಯ, ದೋಹರ ಕಕ್ಕಯ್ಯ ಮೊದಲಾದ ಶರಣರ ಕಥೆಗಳು ಒಂದೊಂದು ತತ್ತ್ವವನ್ನು ಪ್ರತಿಪಾದಿಸುತ್ತವೆ.

ವೃಷಭೇಂದ್ರವಿಜಯ ಜೀವನಚರಿತ್ರೆಯಾದುದರಿಂದ ವಸ್ತುವನ್ನು ಬದಲಾಯಿಸುವುದರಲ್ಲಿ ಕವಿ ಹೆಚ್ಚು ಸ್ವಾತಂತ್ರ್ಯವನ್ನು ವಹಿಸಲಾರನು. ಆದರೂ ಥಾಷ್ಟ್ಯಾರ್ವಿನಯಗಳು ಮತ್ತು ಅನೌಚಿತ್ಯತೋರುವ ಕೆಲವು ಸಂದರ್ಭಗಳನ್ನು ಮೂಲಕಥೆಗೆ ಹೆಚ್ಚು ಭಂಗಬಾರದಂತೆ ಮಾರ್ಪಾಟುಮಾಡಿಕೊಂಡಿದ್ದಾನೆ. ಮೂರು ವರ್ಷಕಾಲ ಮಾದಲಾಂಬೆ ಗರ್ಭಧಾರಣೆ ಮಾಡಿದ್ದಳೆನ್ನುವ ಬಸವಪುರಾಣದ ಸಂಗತಿಯನ್ನು ಲೋಕಾನುಭವಕ್ಕೆ ವಿರೋಧವಾಗದಂತೆ ಷಡಕ್ಷರಿ ಮಾರ್ಪಡಿಸಿದ್ದಾನೆ. ಗೃಹತ್ಯಾಗ ಸಂದರ್ಭದಲ್ಲಿ ಬಸವೇಶ್ವರ ತಂದೆಯೊಡನೆ ಮರ್ಯಾದೆ ಮೀರಿ ಮಾತಾಡಿದ ಹಾಗೆ ಬಸವಪುರಾಣದಲ್ಲಿ ಉಕ್ತವಾಗಿರುವುದನ್ನು ನಯವಿನಯ ವ್ಯಕ್ತವಾಗುವಂತೆ ಷಡಕ್ಷರಿ ವಿವರಿಸಿದ್ದಾನೆ. ಹೋತದ ಬಾಯಿಗೆ ಬಿಗಿಯುವ ಹುರಿಯೆಂದು ಮೌಂಜಿಯನ್ನು ಕಿತ್ತು ಬಿಸಾಡಿ ಉದ್ಧಟತನದಿಂದ ಹೊರಟು ಹೋದ ಹಾಗೆ ಬಸವರಾಜ ದೇವರಗಳೆಯಲ್ಲಿ ಹೇಳಿದೆ. ಸಂಗಮೇಶ್ವರನ ಆಜ್ಞೆಯ ಮೇರೆಗೆ ಕಪ್ಪಡಿಯಿಂದ ಕಲ್ಯಾಣಕ್ಕೆ ಬಸವೇಶ್ವರನೇ ಬಂದಂತೆ ಬಸವರಾಜ ದೇವರಗಳೆಯಲ್ಲಿ ನಿರೂಪಿತವಾಗಿದ್ದರೆ, ಬಲದೇವ ಮಗಳನ್ನು ಮದುವೆಮಾಡಿಕೊಡಲು ತಾನೇ ಬಸವೇಶ್ವರನನ್ನು ಕರೆತಂದುದಾಗಿ ವೃಷಭೇಂದ್ರ ವಿಜಯದಲ್ಲಿ ಹೇಳಿದೆ. ಬಿಜ್ಜಳನ ಕೊಲೆಗೆ ಆಜ್ಞೆಯಿತ್ತು, ಕಲ್ಯಾಣನಗರ ಹಾಳಾಗಲಿ ಎಂದು ಶಾಪಕೊಟ್ಟಂತೆ ಭೀಮಕವಿ ಹೇಳಿದರೆ,

ಷಡಕ್ಷರಿ ಸಾಕ್ಷಾತ್ತಾಗಿ ಯಾವುದಕ್ಕೂ ಬಸವೇಶ್ವರನನ್ನು ಗುರಿ ಮಾಡುವುದಿಲ್ಲ. ಮಾಚಯ್ಯಾದಿ ಶರಣರ ಆಜ್ಞೆಯ ಮೇರೆ ಜಗದೇವ ಬಿಜ್ಜಳನನ್ನು ಕೊಂದುದಾಗಿ ಇಲ್ಲಿ ಹೇಳಿದೆ. ಬಸವೇಶ್ವರನ ಮಹಿಮಾತಿಶಯ ದೃಷ್ಟಿಯಿಂದ ಈ ಮಾರ್ಪಾಟುಗಳು ಸ್ವಾಗತಾರ್ಹವೆಂದು ಹೇಳಬಹುದು.

## ೫. ಶಬರ ಶಂಕರವಿಳಾಸ

ಶಬರಶಂಕರವಿಳಾಸ ಶಿವನ ಪಂಚವಿಂಶತಿ ಲೀಲೆಗಳಲ್ಲೊಂದಾದ ಕಿರಾತರುದ್ರ ಲೀಲೆಯ ವರ್ಣನೆಗಾಗಿ ರಚಿತವಾದ ಗ್ರಂಥ. ಇದು ಕವಿಯ ಮೂರನೆಯ ಕೃತಿ. ಈ ಕಾವ್ಯದ ಕಥಾವಸ್ತು ಸುಪ್ರಸಿದ್ಧವಾದುದು. ವ್ಯಾಸ ಮಹಾಭಾರತದಲ್ಲಿ ಈ ಕಥೆ ಸಿಗುತ್ತದೆ. ಸಂಸ್ಕೃತದಲ್ಲಿ ಭಾರವಿ, ಕನ್ನಡದಲ್ಲಿ ಪಂಪ ಕುಮಾರವ್ಯಾಸ ವಿರೂಪಾಕ್ಷ ಪಂಡಿತ ಮೊದಲಾದ ಕವಿಗಳು ಈ ವಸ್ತುವನ್ನು ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡಿದ್ದಾರೆ. ಅರ್ಜುನ ತಪಸ್ಸುಮಾಡಿ ಕಿರಾತವೇಷದ ಈಶ್ವರನಿಂದ ಪಾಶುಪತಾಸ್ತ್ರ ಪಡೆದ ಕಥೆಯೇ ಈ ಕಾವ್ಯದ ವಸ್ತು.

ಶಬರ ಶಂಕರವಿಳಾಸದಲ್ಲಿ ಐದು ಆಶ್ವಾಸಗಳಿವೆ. ಪ್ರಥಮಾಶ್ವಾಸದಲ್ಲಿ ಈಶ್ವರನ ಒಡ್ಡೋಲಗದ ವರ್ಣನೆಯೂ, ದ್ವಿತೀಯಾಶ್ವಾಸದಲ್ಲಿ ಅರ್ಜುನನ ತಪಸ್ಸಿನ ವರ್ಣನೆಯೂ, ತಪೋಜ್ವಾಲೆಯಿಂದ ಬೆಂದಋಷಿಗಳಿಗೆ ಶಿವ ಅಭಯವಚನವಿತ್ತ ಸಂಗತಿಯೂ ಬರುತ್ತವೆ. ಶಿವ ಶಿವಾಣಿಯರು ಬೇಡ ಬೇಡಿತಿಯರಾಗಿ, ಪ್ರಮಥರೂ ದೇವಸ್ತ್ರೀಯರೂ ಬೇಡಪಡೆಯಾಗಿ ವನ್ಯಮೃಗಗಳ ಬೇಟೆಗಾಗಿ ಇಂದ್ರಕೀಲ ಪರ್ವತಕ್ಕೆ ಹೊರಟ ವಿಷಯ ತೃತೀಯಾಶ್ವಾಸದಲ್ಲಿ ಬರುತ್ತವೆ. ಚತುರ್ಥಾಶ್ವಾಸದಲ್ಲಿ ಕಥೆ

ಶಿಖರವನ್ನು ಮುಟ್ಟುತ್ತದೆ. ಇಂದ್ರಕೀಲದ ಕಂದರದಲ್ಲಿ ವಾಸಿಸು ತ್ತಿದ್ದ ಮೂಕದಾನವನೆಂಬ ರಾಕ್ಷಸನು ಬೇಟೆಯ ಮಹಾರವ ವನ್ನು ಕೇಳಿ ವರಾಹರೂಪದಿಂದ ಹೊರಗೆ ಬರುತ್ತಾನೆ. ಭಯಂಕರಾಕಾರದ ಆ ಹಂದಿಯನ್ನು ನೋಡಿ ಕಿರಾತರುದ್ರನ ಪಡೆಯ ಬೇಡರು ಅದರ ಮೇಲೆ ಕವಿಯುತ್ತಾರೆ. ಹಂದಿ ರೋಷಾಟೋಪದಿಂದ ಮುನ್ನುಗ್ಗಿ ಸಿಕ್ಕಿದವರನ್ನೆಲ್ಲ ಸೀಳುತ್ತದೆ. ಅದರ ಆಟೋಪದ ಬೇಗೆಯನ್ನು ಸಹಿಸಲಾರದೆ ಹಿಮ್ಮೆಟ್ಟು ತ್ತಿದ್ದ ಬೇಡಪಡೆಗೆ ಅಭಯವಿತ್ತು ಈಶ್ವರ ದಿವ್ಯಮಾರ್ಗಣ ದಿಂದ ಅದನ್ನು ಹೊಡೆಯುತ್ತಾನೆ. ತುಸು ಮೂರ್ಛಿತವಾದ ಹಂದಿ ಕೂಡಲೆ ಚೇತರಿಸಿಕೊಂಡು ಅರ್ಜುನನ ತಪೋಸ್ಥಾನಕ್ಕೆ ಓಡುತ್ತದೆ. ಅದರ ಅಬ್ಬರವನ್ನು ಕೇಳಿ ಕಣ್ಣುಬಿಟ್ಟ ಪಾರ್ಥ ಆಶ್ರಮಕಂಟಕವಾದ ಹಂದಿಯನ್ನು ಹೊಡೆದು ನೆಲಕ್ಕುರುಳಿಸು ತ್ತಾನೆ. ಅದರ ಬೆನ್ನ ಹಿಂದೆಯೇ ಬಂದ ಈಶ್ವರ ಸತ್ತ ಹಂದಿ ಯನ್ನು ತೆಗೆದುಕೊಳ್ಳುವಂತೆ ತನ್ನ ಕಡೆಯವರಿಗೆ ಆಜ್ಞೆಮಾಡು ತ್ತಾನೆ. ತಾನು ಹೊಡೆದದ್ದು ಎಂದು ಅರ್ಜುನ ಅವರನ್ನು ತಡೆಯುತ್ತಾನೆ. ಕಿರಾತ ಪಾರ್ಥರಿಗೆ ಮಾತುಮೀರಿ ಕೈಕೈ ಕೂಡುತ್ತದೆ: ಒಬ್ಬರನ್ನೊಬ್ಬರು ಹಳಿಯುತ್ತಾರೆ; ಅಸ್ತ್ರಯುದ್ಧ ಮುಷ್ಟಿಯುದ್ಧಗಳಲ್ಲಿ ಅರ್ಜುನನ ಕೈ ಕೆಳಗಾಗುತ್ತದೆ. ಅಪ ಮಾನದ ಚಿಂತಾಭಾರದಿಂದ ಕುಗ್ಗಿದ ಅರ್ಜುನ ಮಣಲಲಿಂಗ ವನ್ನು ಹೂತಿರಿಸಿ ಪೂಜೆಮಾಡಿ, ನವೋತ್ಸಾಹದಿಂದ ಕಿರಾತ ನನ್ನು ಮತ್ತೆ ಎದುರಿಸುತ್ತಾನೆ. ಮಣಲಲಿಂಗದ ಮೇಲಿನ ಹೂವು ಗಳನ್ನು ಕಿರಾತನ ತಲೆಯ ಮೇಲೆ ಕಂಡು, ಅವನೇ ಪರಶಿವ ನೆಂದು ನಿರ್ಣಯಿಸಿ, ಅವನೊಡನೆ ಸೆಣಸಿದ ಉದ್ಧಟತನಕ್ಕೆ ವ್ಯಸನಪಟ್ಟು ನಮಸ್ಕಾರ ಪೂರ್ವಕವಾಗಿ ಕ್ಷಮಾಪಣೆ ಯಾಚಿ

ಸುತ್ತಾನೆ. ಪಂಚಮಾಶ್ವಾಸದಲ್ಲಿ ಶಿವ ಪಾರ್ಥನಿಗೆ ನಿಜರೂಪು ತೋರಿಸಿ ಪಾಶುಪತಾಸ್ತ್ರವನ್ನೂ ಪಾರ್ವತಿ ಅಂಜನಾಸ್ತ್ರವನ್ನೂ ಕೊಟ್ಟ ವಿಷಯ ಉಕ್ತವಾಗಿದೆ.

ಕಥಾಸಂವಿಧಾನ, ಸಂದರ್ಭಯೋಜನೆ ಮತ್ತು ಪಾತ್ರ ಪೋಷಣೆಯನ್ನು ನೋಡಿದರೆ ಶಬರಶಂಕರ ವಿಳಾಸ ಮಹಾ ಭಾರತ ಮತ್ತು ಗದುಗಿನ ಭಾರತಗಳನ್ನನುಸರಿಸುವಂತೆ ಕಿರಾ ತಾರ್ಜುನೀಯವನ್ನನುಸರಿಸುವುದಿಲ್ಲ. ಕಿರಾತಾರ್ಜುನೀಯ ದಲ್ಲಿ ಬರುವ ಮೇನಕಾದಿ ಅಪ್ಸರೆಯರು ಅರ್ಜುನನ ತಪಸ್ಸನ್ನು ಭಂಗಪಡಿಸಿದ ಸಂಗತಿ ಶಬರ ಶಂಕರ ವಿಳಾಸದಲ್ಲಿ ಬರುವುದಿಲ್ಲ. ಶಬರ ಶಂಕರ ವಿಳಾಸಕ್ಕೂ ಕುಮಾರವ್ಯಾಸ ಭಾರತದ ಕೈರಾತ ಪ್ರಸಂಗಕ್ಕೂ "ವಿಷಯ ವಿವರಣೆಯಲ್ಲಿ ಸಂಗತಿಗಳ ಆನು ಪೂರ್ವಿಯಲ್ಲಿ, ಅಷ್ಟೇ ಅಲ್ಲದೆ ಸಂಭಾಷಣೆಯ ತೆರದಲ್ಲಿಯೂ ಹಲಕೆಲವು ಹೋಲಿಕೆಗಳು ದೃಗ್ಗೋಚರವಾಗುವುವು." ಶೈಲಿ ಯಲ್ಲಿಯೂ ಅಲ್ಲಲ್ಲೆ ಸಾಮ್ಯ ಕಾಣಬಹುದಾದರೂ ಷಡಕ್ಷರಿಯ ಪಾಂಡಿತ್ಯಶೈಲಿಯ ವೈಶಿಷ್ಟ್ಯದ ವೈಜಯಂತಿಯೆ ಸದಾ ಹಾರಾಡುತ್ತಿರುತ್ತದೆ. "ಇಲ್ಲಿ ಕಾಣುವುದು ಕುಮಾರವ್ಯಾಸನ ಭಾವಗಳ ಇಲ್ಲವೆ ಶೈಲಿಯ 'ಮಕ್ಕಾಮಕ್ಕಿ' ತೆರದ ಶುಷ್ಕಾನು ಕರಣವಲ್ಲ; ವರ್ಣಕವನ್ನು ವಸ್ತುಕಕ್ಕೆ ತಿರುಗಿಸುವಲ್ಲಿ ಕಂಡು ಬರುವ ಆತನ ಪರುಷ ಹಸ್ತದ ಪ್ರಭಾವ." ಈ ಮಾತು ಬಹು ಮಟ್ಟಿಗೆ ನಿಜ.

ಈ ಕಾವ್ಯದಲ್ಲಿ ಕಥೆಗಿಂತ ವರ್ಣನೆಯೆ ಹೆಚ್ಚು. ಅಷ್ಟಾ ದಶವರ್ಣನೆ ಪರಂಪರಾಗತವಾಗಿ ಕನ್ನಡದ ಎಲ್ಲ ಕವಿಗಳಿಗೂ ಅಂಟಿಕೊಂಡು ಬಂದಿರುವ ಹುಚ್ಚು. ಕಥೆಯ ಕ್ರಿಯೆಗೆ ಪಾತ್ರ ಪೋಷಣೆಗೆ ಅನಾವಶ್ಯಕವಾದರೂ, ಶ್ರೋತೃಗಳಿಗೆ ತಲೆಚಿಟ್ಟು

ಹಿಡಿಸುವಷ್ಟು ವರ್ಣನೆಗಳನ್ನು ತುರುಕುವುದು ನಡೆದುಬಂದ ಸಂಪ್ರದಾಯವಾಗಿದೆ. ಅಲ್ಲೊಬ್ಬ ಇಲ್ಲೊಬ್ಬ ಮಾತ್ರ ಈ ಸಂಪ್ರದಾಯದ ಶೃಂಖಲೆಯಿಂದ ಪಾರಾಗಲು ಪ್ರಯತ್ನಿಸಿದ್ದಾರೆ. ಈ ವರ್ಣನೆಗಳಲ್ಲಾದರೂ ಸ್ವತಂತ್ರವಾದ ಪ್ರತಿಭಾದರ್ಶನವನ್ನಾಗಲಿ, ಕಲ್ಪನಾಚಾತುರ್ಯವನ್ನಾಗಲಿ, ಸೌಂದರ್ಯಾಭಿವ್ಯಕ್ತಿಯನ್ನಾಗಲಿ ಕಾಣುವುದು ಕಷ್ಟ. ಒಂದು ಮತ್ತೊಂದರ ಪಡಿಯಚ್ಚು. ಅನೇಕ ಕಾವ್ಯಗಳ ಕಥೆ ಸಾಮಾನ್ಯವಾಗಿ ಸಮುದ್ರ, ಜಂಬೂದ್ವೀಪ, ಮೇರುಪರ್ವತ, ಪರ್ವತದಲ್ಲಿ ವಿಹರಿಸುವ ಖೇಚರ ಖೇಚರಿಯರು, ರಾಜಧಾನಿ, ಉಪವನ, ಅಲ್ಲಿಯ ಪಕ್ಷಿಗಳು, ರಾಜವೀಧಿ, ಅಂಗಡಿಗಳ ಸಾಲು, ಹೂವಾಡಿಗರು, ಸೂಳೆಗೇರಿ, ಕೋಟೆ, ಕಂದಕ, ಅರಮನೆ, ಒಡ್ಡೋಲಗ, ವಿವಾಹ, ರಾಜರಾಣಿಯರು, ಸಂತಾನ ಹೀನತೆಯ ಶೋಕ, ಸಂತಾನಪ್ರಾಪ್ತಿ, ಬಾಲಲೀಲೆ, ಚಂದ್ರಕಾವಿಹಾರ, ಜೈತ್ರಯಾತ್ರೆ, ಗದ್ದೆಹೊಲಗಳು, ಪ್ರಪಾಶಾಲೆ ಮತ್ತು ಅಲ್ಲಿಯ ಪ್ರಮದೆಯರು, ಮೃಗಯಾವಿಹಾರ, ದ್ಯೂತ, ಷಡೃತುಗಳು–ಈ ವರ್ಣನಾಶೃಂಖಲೆಗಳಿಂದ ಕೂಡಿರುತ್ತದೆ. ಷಡಕ್ಷರಿಯೂ ಈ ಸಂಪ್ರದಾಯಕ್ಕೆ ಹೊರತಾಗಿಲ್ಲ. ಶಬರ ಶಂಕರವಿಳಾಸದಲ್ಲಿ ಬರುವ ಮೇರುಪರ್ವತ, ಸಮುದ್ರ, ಮತ್ತು ಬೇಟೆಯ ವರ್ಣನೆಗಳಲ್ಲಿ " ಕವಿ ಸಂಪ್ರದಾಯದ ಕಟ್ಟಿಗೆ ಸೋತಿದ್ದಾನೆ, ಜೋತಿದ್ದಾನೆ " ಕೆಲವು ವರ್ಣನೆಗಳು ಹಾಳತ ತಪ್ಪಿ, ತೂಕಮೀರಿ " ಬೇಸರಿಕೆ "ತರುವಂತಿವೆ; ಕಲ್ಪನಾಸುಂದರವಾದ ಕೆಲವು ವರ್ಣನೆಗಳ ದಂಡಕಾರಣ್ಯದಲ್ಲಿ ಕಥೆಯ ಗತಿ ದಾರಿ ತಪ್ಪಿ ಓದುಗ ತೊಳಲಿ ಬಳಲಿ ಬಸವಳಿಯಬೇಕಾಗುತ್ತದೆ. ಅಪರ ವಯಸ್ಸಿನಲ್ಲಿ ಬರೆದ ಕವಿಯ " ಈ ಸಣ್ಣ ಕಾವ್ಯದಲ್ಲಿ ರಾಜಶೇಖರವಿಳಾಸದ

ಪ್ರಸನ್ನತೆಯಾಗಲೀ, ವೃಷಭೇಂದ್ರ ವಿಜಯದ ಗಾಂಭೀರ್ಯ ವಾಗಲೀ ಇಲ್ಲ," ಎಂದು ಧಾರಾಳವಾಗಿ ಹೇಳಬಹುದು.

## ೬. ವರ್ಣನೆ ಮತ್ತು ರಸನಿರೂಪಣೆ

ಈ ಮೂರು ಕೃತಿಗಳ ಸ್ಥೂಲಪರಿಚಯದಿಂದ ಷಡಕ್ಷರ ದೇವನ ವ್ಯಕ್ತಿತ್ವದ ಮಹೋನ್ನತಿ ಮತ್ತು ಕಾವ್ಯಸಂಸ್ಕೃತಿಗಳು ಸುಸ್ಪಷ್ಟವಾಗಿ ಗೋಚರವಾಗುತ್ತವೆ. ಪ್ರತಿಭೆ ಕಲ್ಪನಾ ಚಾತುರ್ಯ ಮತ್ತು ವಾಕ್ಶಕ್ತಿ ದೈವದತ್ತವಾಗಿ ಬಂದಿದ್ದುವು. ವ್ಯಾಸ ವಾಲ್ಮೀಕಿ ಭಾಸ ಕಾಲಿದಾಸ ಭಾರವಿ ಮೊದಲಾದ ಸಂಸ್ಕೃತ ಕಾವ್ಯ ಪ್ರಪಂಚದ ಕವಿಸಮ್ರಾಟರ ಮತ್ತು ಪಂಪ ರನ್ನ ಹರಿಹರ ಕುಮಾರವ್ಯಾಸ ವಿರೂಪಾಕ್ಷಪಂಡಿತ ಮೊದಲಾದ ಕನ್ನಡ ಕವಿ ಕುಲಶ್ರೇಷ್ಠರ ಕೃತಿಗಳ ಗಾಢಪರಿಚಯದಿಂದ ಲಬ್ಧವಾದ ಪಾಂಡಿತ್ಯದಿಂದ ಪ್ರತಿಭೆ ಕಲ್ಪನಾಚಾತುರ್ಯಗಳು ಸಂಸ್ಕಾರಗೊಂಡು ವಾಕ್ಶಕ್ತಿ ಹೊಸ ಮೆರುಗು ಪಡೆದಿತ್ತು; ತಪೋಬಲದಿಂದ ಈ ಶಕ್ತಿಗಳೆಲ್ಲ ಮಹಿಮಾನ್ವಿತವಾಗಿದ್ದುವು. ಜೊತೆಗೆ ಅರಮನೆ ಗುರುಮನೆಗಳ ಸಂಪರ್ಕದಿಂದ ಅಸಾಧಾರಣ ವಾದ ಲೋಕಾನುಭವವೂ, ಮಾನವ ಹೃದಯದ ಆಳ ವಿಸ್ತಾರಗಳನ್ನರಿಯುವ ಸೂಕ್ಷ್ಮಗ್ರಹಣಶಕ್ತಿಯೂ, ಮಾನವ ಸಂಸ್ಕೃತಿಯ ಜೀವಾಳವಾದ ವಿನಯ ಸೌಜನ್ಯ ಪರೇಂಗಿತ ಜ್ಞತೆಯೆ ಮೊದಲಾದ ಗುಣ ವಿಶೇಷಗಳೂ ಸಂಪ್ರಾಪ್ತವಾಗಿ, ಅವನ ಸಹಜಶಕ್ತಿ ಪ್ರವೃತ್ತಿಗಳು ಪರಿಷ್ಕಾರಗೊಂಡಿದ್ದುವು. ಪಂಚಾಕ್ಷರೀಮಹಿಮೆ, ಶಿವಶರಣರ ಕಥಾಲಾಪ ಮತ್ತು ಶಿವ ಪಂಚವಿಂಶತಿಲೀಲಾ ವರ್ಣನೆಯ ಮೂಲಕ ಪರಮಾರ್ಥವನ್ನು ಸಾಧಿಸುವುದರ ಜೊತೆಗೆ ಕಾವ್ಯಾರ್ಥವನ್ನೂ ಸಾಧಿಸುವುದು

ಕವಿಯ ಪ್ರಧಾನೋದ್ದೇಶ. ಪುರಾತನ ಲಾಕ್ಷಣಿಕರ ಸಂಪ್ರದಾಯದ ಸೂತ್ರದಿಂದ ಕಟ್ಟುಗೊಂಡು ಅಷ್ಟಾದಶವರ್ಣನೆ, ಯಮಕರೂಪಕ ವಿರೋಧಾಭಾಸ ಪರಿಸಂಖ್ಯೆ ಶ್ಲೇಷಾದ್ಯಲಂಕಾರಗಳ ಜೋಡಣೆ ಮತ್ತು ನವರಸ ನಿರೂಪಣೆ ಕಾವ್ಯದ ಶೋಭೆಗೆ ಅತ್ಯಾವಶ್ಯಕವೆಂದು ತಿಳಿದು,—ಬಹುಶಃ ಪಂಡಿತ ಮಾನ್ಯನಾಗಬೇಕೆಂಬ ಭ್ರಮಾಬುದ್ಧಿಯಿಂದ—ಒಮ್ಮೊಮ್ಮೆ ತನ್ನ ಸ್ವಾತಂತ್ರ್ಯವನ್ನು ಸೂರೆಗೊಟ್ಟು ಕಥೆಯ ಕ್ರಿಯೆ ತತ್ತರಿಸುವಂತೆ, ಔಚಿತ್ಯಮೀರಿದ ವರ್ಣನೆಗಳ ಬಾಡಬಕ್ಕದ ಮುಳ್ಳುಗಳು ಪ್ರತಿಭೆಯನ್ನು ಸುತ್ತಲೂ ಪರಚುತ್ತಿದ್ದರೂ, ತದೇಕ ಗುರಿಯನ್ನು ತಲುಪಲು ಯತ್ನಿಸಿದ ಸಾಹಸಕವಿ ಷಡಕ್ಷರಿ. 'ದೇಶಿ'ಯಲ್ಲಿ ಸರಾಗವಾಗಿ ಕಾವ್ಯರಚನೆ ಮಾಡಬಲ್ಲ ಶಕ್ತಿ ಸಾಮರ್ಥ್ಯವಿದ್ದರೂ, 'ಮಾರ್ಗಿ' ಯ ಕಡೆ ವಾಲಿದ, ವರ್ಣಕದ ಸರಳರೀತಿ ಹಿಡಿಸದೆ ವಸ್ತುಕದ ಓಜೋನ್ವಿತ ಶೈಲಿಯ ಜಾಡನ್ನು ಹಿಡಿದ ಪಂಡಿತಕವಿ ಅವನು. ವಸ್ತುಕವಾಗಲಿ ವರ್ಣಕವಾಗಲಿ, ದೇಶಿಯಾಗಲಿ ಮಾರ್ಗಿಯಾಗಲಿ ಷಡಕ್ಷರಿಯಂಥ ಪ್ರತಿಭಾವಂತ ಕವಿ ಹರಿಹರನಂತೆ ಕಾವ್ಯರಚನೆಯಲ್ಲಿ ಸ್ವಾತಂತ್ರ್ಯವನ್ನು ವಹಿಸಿದ್ದರೆ ಕ್ರಾಂತಿಪುರುಷನಾಗಬಹುದಿತ್ತು. ಆದರೂ ಅವನ ಕಾವ್ಯಗಳು ಅವನ ಶಕ್ತಿ ಸಾಮರ್ಥ್ಯಗಳಿಗೆ ಪಾಂಡಿತ್ಯ ಸಾಹಸಗಳಿಗೆ ಜೀವಂತಸಾಕ್ಷಿಗಳಾಗಿರುತ್ತವೆಯೆಂಬುದರಲ್ಲಿ ಸಂದೇಹಲೇಶವಿಲ್ಲ.

ವರ್ಣನೆಗಳು ಕಥಾಕ್ರಿಯೆಗೆ ಅಡ್ಡಿಬರುವುದರಿಂದ, ಪಾತ್ರ ಪೋಷಣೆಗಾಗಲಿ ಸನ್ನಿವೇಶ ರಚನೆಗಾಗಲಿ ಅನುಕೂಲವಲ್ಲ ಮದರಿಂದ, ಅವು ಅತಿಯಾಮವೆಂದು ಮೇಲೆ ಹೇಳಿತು. ಆದರೆ ಅವುಗಳಲ್ಲಿ ಕಾಣಬರುವ ಕಲ್ಪನಾ ವಿಲಾಸ, ವಸ್ತು

ನಿಷ್ಠವಾದ ಗುಣಜ್ಞತೆ, ಪ್ರಕೃತಿವ್ಯಾಪಾರಗಳ ಸಹಜನಿರೂಪಣೆ ಅವನ ಪ್ರತಿಭೆಗೆ ನಿದರ್ಶನವಾಗಿವೆ. ಇದು ಚಳಿಗಾಲದ ವರ್ಣನೆ :

ನಡುಕಂ ಕೈಮೀರೆ ದಂತಚ್ಛದ ಮೊಡೆದು ಹುಹುಧ್ವಾನಮುಂ ಪೊಣ್ಮೆ ಮೆಯ್ಯೊ
ಳ್ಪಿಡವೆತ್ತಂ ತೋರೆ ರೋಮೋದ್ಗಮಮುಮರ್ದಿರೆ ಸೀತ್ಕಾರಮುಂಗೈ ಪೆರಲ್ಕಾಲ್
ಕಡಿವೆತ್ತಂತಾಗೆ ತಳ್ತೈಕಿಲ ಭರದೆ ಪಡಲ್ಪಟ್ಟು ಗೇಣಾಗಿ ಪಾಂಥ
ತ್ಕೊರ್ಡೆ ತೋಳ್ಗಳ್ಕೂಡೆ ಜಾನುಪ್ರಹಿತ ಶಿರರದೇಸಿರ್ದರೋ ಶೀತಭೀತರ್

ಚಳಿಗಾರದೆ ಪೇರಾಲದ
ಕೆಳಗಿರ್ಪ್ಪನಿತರೊಳೆ ಚಪಳಕಪಿ ಸಿಡುಗೋಡಂ
ಸೆಳೆದಲುಗೆ ಸೂಸುವೆಲೆವನಿ
ಗಳಿನೊರ್ವಂ ನನೆದು ನಡುಗಿ ಸಿಡಿಮಿಡಿಗೊಂಡಂ

ಅಧಿಕವಾದ ಚಳಿಯಿಂದ ಮೈಯೆಲ್ಲ ನಡುಗುವುದು, ಹಲ್ಲು ಕಡಿಯುವುದು, ಕೈಕಾಲುಗಳನ್ನು ಕಚ್ಚುತ್ತಿರುವಂತೆ ಅನುಭವ ವಾಗುವುದು, ತೋಳು ತೊಡೆ ಒಂದಾಗಿ ಶಿರ ಅವುಗಳನ್ನು ಕೂಡಿ ದೇಹವೆಲ್ಲ ಗೇಣುದ್ದವಾಗುವುದು—ಇದೆಲ್ಲ ಮಾಗಿಯ ಕಾಲದ ಸಹಜಚಿತ್ರ; ಇದರಲ್ಲಿ ಅತಿಶಯವಿಲ್ಲ, ಅಲಂಕಾರವಿಲ್ಲ. ಇದನ್ನು ಓದಿದವನಿಗೆ ಚಳಿಗಾಲದ ಭೀಕರತೆ ಮನದಟ್ಟಾಗ ದಿರದು.

ಬೆಳುದಿಂಗಳಿಂದಕೂಡಲೆ ಒಬ್ಬೊಬ್ಬನ ಮನಸ್ಸಿನಲ್ಲಿ ಒಂದೊಂದು ತೆರನಾದ ಭಾವವೀಚಿಗಳೇಳುವುದು ಸಹಜ; ಕಲ್ಪನೆಯ ಪಕ್ಷಿ ರೆಕ್ಕೆಗೆದರಿ ವ್ಯೋಮಯಾತ್ರಿಯಾಗುವುದುಂಟು.

ಆಗ ಮಾತು ಕಲ್ಪನಾಗರ್ಭಿತವಾಗಿ ಅಲಂಕಾರಮಯವಾಗು ತ್ತದೆ. ಕವಿ ಬೆಳುದಿಂಗಳ ಸ್ವರೂಪ ಸ್ವಭಾವವನ್ನು ವ್ಯಂಗ್ಯಾರ್ಥದ ಮೂಲಕ ಸೂಚಿಸುತ್ತಾನೆ.

ಮಿಸುಪ ಸಿಶಾಸಿತಂಬಿನಿಗೆ ಬೆಳ್ಪುಡೆಯಾದುದು ಭಾನುರೋಚಿಯಿಂ
ಬಸವಳಿದೀ ಧರಾಂಗನೆಗೆ ಚಂದನಲೇಪನವಾದುದಂಬುಜ
ಪ್ರಸರದಗಲ್ಕೆಯಿಂ ನೆಗೆದ ತುಂಬಿಗೆ ಮಲ್ಲಿಗೆ ಮಾಲೆಯಾದುದಾ
ಪಸಿದ ಚಕೋರಿಗಳ್ಗೆ ಸುಧೆಯಾದುಡು ಕಾಂತಿ ಸುಧಾಮಯೂಖನಾ

ಸೊಗೆ ಸೊಗೆದೀಂಟಿಯಿಾಂಟಿ ತನುಮಧ್ಯಕೆ ತಳ್ವದೆ ಸುತ್ತಿಸುತ್ತಿ ಪೇ
ಣಿಗೆ ಮಿಗೆ ಸೂಡಿ ಸೂಡಿ ಲಲಿತಾಂಗದೊಳೊಯ್ಯನೆ ಪೂಸಿ ಪೂಸಿ ಪೆ
ಲ್ಲಗೆ ಬಿಡವೆಬ್ಬಿರ್ಯಬ್ಬಿರ್ ಬಗೆದಂಡು ಮುಳುಂಗಿ ಮುಳುಂಗಿ ಕೇತುಕಂ
ಬಗೆಗೊಳೆ ನೋಡಿ ನೋಡಿ ನಲಿದತ್ತಬಳಾಜನಮಚ್ಚ ಜೊನ್ನಮಂ

ಈ ಪದ್ಯಗಳು ಬೆಳುದಿಂಗಳ ಸ್ವಚ್ಛತೆ, ಪ್ರಶಾಂತತೆ, ತಣ್ಪಿಂಪುಗಳನ್ನು ಮನಸ್ಸಿಗೆ ತಂದು ಕೊಟ್ಟು ಓದುಗರ ಕಲ್ಪನಾ ಕುತೂಹಲವನ್ನು ಕೆರಳಿಸಿ ಬೇರೊಂದು ಲೋಕಕ್ಕೆ ಕೊಂಡೊಯ್ದರೆ, ಕೆಳಗಣ ಪದ್ಯ ಭೀಕರತೆ ಅಶಾಂತಿ ಕಳವಳಗಳ ಭಾವವನ್ನು ತಂದುಕೊಡುತ್ತದೆ. ರಾಜಶೇಖರನ ಚಂದ್ರಿಕಾ ವಿಹಾರ ಸಮಯದ ಸಂದರ್ಭದಲ್ಲಿ ಇದು ಅಪ್ರಕೃತವೆಂದು ತೋರುತ್ತದೆ.

ಇದು ತಮಮೆಂಬ ಶಂಬರಧಿಯಂ ಸಲೆ ಪೀರ್ವ ಮಹೌರ್ವವಹ್ನಿಯೋ
ಇದು ತಮಮೆಂಬ ಕರ್ಪಿರ್ಡಿದ ಕಾನನಮಂ ಸುಡುವಗ್ನಿ ಪಿಂಡಮೋ
ಇದು ತಮಮೆಂಬ ಕೃಷ್ಣಭುಜಗವ್ರಜಮಂ ತವೆ ಕೊಲ್ವ ತಾರ್ಕ್ಷ್ಯಮೋ
ಇದು ತಮಮೆಂಬ ರಕ್ಕಸನನಿಕ್ಕುವ ಚಕ್ರಮೊ ಚಂದ್ರಬಿಂಬಮೋ

ಕತ್ತಲಿಡಿದ ಆಕಾಶದಲ್ಲಿ ನಕ್ಷತ್ರಗಳು ಹೇಗೆ ಮಿನುಗುತ್ತಿದ್ದುವೆಂಬುದನ್ನು ಕವಿ ಹೇಳುವ ರೀತಿಯಿದು:

ಇಡಿದ ತಮವೆಂಬ ಜಗುನೆಯ
ಮಡುವಿನ ಮಧ್ಯದೊಳ್ ಸುಳಿವ ಮೀಂಗಳಿವೆಂಬಂ
ತಿಡಿಕಿರಿದು ತುರುಗಿ ಮಿರುಗುತೆ
ಕಡುಸೊಗಸಂ ಪಡೆದುವರರೆ ತಾರೆಗಳಾಗಳ್

ನಕ್ಷತ್ರಗಳು ಕತ್ತಲಿನ ಮಡುವಿನಲ್ಲಿ ಸುಳಿದಾಡುತ್ತಿರುವ ಮೀನುಗಳಂತೆ! ಮೀನುಗಳನ್ನು ಡೊಂಬನಿಗೆ ಹೋಲಿಸಿ ಕಲ್ಪಿಸಿರುವ ಚಿತ್ರ ತುಂಬ ಸೊಗಸಾಗಿದೆ:

ಕುವಳಯ ಕುಟ್ಮಳಾವಳಿಯ ಪೆರ್ಗ್ಗಳೆಯುಂ ನೆಗೆವೇರಿ ಲಾಗಿಸು
ತ್ತಿ ವನಜವಲ್ಲರೀ ನಿಬಿಡ ಕಂಟಕ ಸೂಚಿ ನಿಬದ್ಧ ಯಂತ್ರದೊ
ಳ್ತಿವೆ ನುಸುಳ್ದೇರಿ ಪಾಸೆನಿಳಿಯೊಳ್ಪರಿದಾಡಿ ತರಂಗ ಸಂಘಸಂ
ಭವ ರವವಾದ್ಯಕಾಡಿದುದು ಕೂಡೆ ಝಷಂ ಪೊಸಡೊಂಬನೆಂಬಿನಂ

ಬೇಡ ಪಡೆಯ ಅಬ್ಬರವನ್ನು ಕೇಳಿ ರೋಷಾವೇಶಯುತವಾದ ಹುಲಿಯ ವರ್ಣನೆ ಓದುಗರ ಮನಸ್ಸಿನಲ್ಲಿ ಜೀವಂತವಾದ ಸಹಜ ಚಿತ್ರವನ್ನು ಮೂಡಿಸದಿರದು.

ಕುಸಿದ ಪರಾಂಗವುಜ್ಜ್ವಳಿತ ಪಿಂಗಳ ಲೋಚನಮುಗ್ರದಂಷ್ಟ್ರಮಾ
ರ್ಪ್ಪಿಸೆವ ಮನಂ ಧರಿತ್ರಿಯೊಳ್ ಚಾಲಿಪ ಬಾಲಮುಗುರ್ವ್ವಿಪಾನನಂ
ನಸುನೆಗೆದಿರ್ದ್ದ ತೋರತಲೆ ಮುಂಗಡೆ ಸಾರ್ಚ್ಚಿದ ಕಾಲರಲ್ದ ಮೂ
ಗೆಸೆಯೆ ತರಕ್ಷು ದಂಶಶತ ಸಂವೃತಮಿರ್ದ್ದುದದೊಂದು ತಾಣದೊಳ್.

ಇಂದ್ರಕೀಲ ಪರ್ವತದ ಕಾನನದಲ್ಲಿದ್ದ ಮೂಕದಾನವ ಕಿರಾತರ ಬೇಟೆಯಬ್ಬರವನ್ನು ಕೇಳಿ—ಅದು ಸಾಮಾನ್ಯವಾದ ಬೇಟೆಯಲ್ಲ, ಈಶ್ವರನೇ ಕಿರಾತರೂಪವನ್ನು ತಾಳಿ ಎಸಗಿದ ಬೇಟೆ—ವರಾಹರೂಪವನ್ನು ತಾಳಿ ಹೊರಗೆ ಬರುತ್ತಾನೆ. ‘ಬಡಬಜ್ವಾಲೆಯ ವಿಸ್ಫುಲಿಂಗ ತತಿಯಂತಿರ್ಪ ಕಣ್ ಚಕ್ರದಿರ್ಕಡೆಯಂ

ಬಾಯೊಳಿಱುಂಕಿದಂತೆ ಪೊಳೆಪಿಂ ಕೊಂಕಿರ್ದ ಕೂರ್ದಾಡೆ'
ಗಳನ್ನು ಹೊಂದಿದ್ದ ಆ ಹಂದಿ

ಖುರಖುರಘಾತದಿಂದೆ ಪುಡಿಯೇಟಿಕೆ ಶಿಲಾತಳವೊತ್ತಿ ಮೆಟ್ಟಿವೆ
ಯ್ಯೊರಸೆ ಬೃಹತ್ಕುಜ ಪ್ರತತಿ ನುರ್ಗೆ ವಿಜೃಂಭಣಮಾಳ್ದು ಗರ್ಜಿಸು
ತ್ತುರುತರ ಪರ್ವತಂ ಪ್ರತಿರವಂಗುಡೆ ಬೆರ್ಚಿಸಿ ತನ್ನಗೇಂದ್ರ ಕಂ
ದರ ಮೃಗರಾಜಿಯಂ ಜವದಿನೇೞ್ತಿರುತಿರ್ದುದು ಸೊರ್ಕಿದೆಕ್ಕಲಂ

ಆ ಭಯಂಕರಾಕಾರದ ಶೌರ್ಯಾನ್ವಿತವಾದ ಸೂಕರನ
ಮೇಲೆ ಬೇಟೆಗಾರರೆಲ್ಲ ಒಟ್ಟಾಗಿ ನುಗ್ಗಿದರು. ಅಂಥ ಸಂದ
ರ್ಭದಲ್ಲಿನ ಆ ಹಂದಿಯ ಭಂಗಿ ಭಣಿತೆಗಳನ್ನು, ಅದರ ಉಗ್ರ
ಚಿತ್ರವನ್ನು ಕವಿಯೇ ಹೇಳಲಿ!

ಪೊಗೆ ಪೊಱಸೂಸೆ ಘೂರ್ಮಿಸುವ ಮೂಗಿನೊಳೀಕ್ಷಿಪ
ಲೋಹಿತಾಕ್ಷಿಯಿಂ
ಭುಗಿಲೆನೆ ಪೊಣ್ಮೆ ದಳ್ಳುರಿ ಕರಂ ಮಸೆದಗ್ಗದ ದಾಡೆಯಗ್ರದಿಂ
ದುಗುತಿರೆ ತೋರ ಕೆಂಗಿಡಿಗಳುಗ್ರತೆಯಂ ತಳೆದುರ್ಕಿ ಸೊರ್ಕಿನಿಂ
ದಗಲದೆ ನುಂಗಲಪ್ಪಳಿಸಿದತ್ತು ವರಾಹಕನಾ ಕಿರಾತರಂ

ಕುಸಿದ ಸಿರಂ ಕೆಲಕ್ಕೊಲೆವ ಬಲ್ಮುಸುಡುಬ್ಬಿದ ಮೆಯ್ಯ ರೋಮಮಾ
ರ್ಪಸೆವ ಮನಂ ಮರಲ್ದ ಕಿವಿ ಮಿಳ್ಳಿಱಿದಾಡುವ ಬಾಲಮುರ್ವಿ ಪಾ
ಯ್ವುಸಿರೊಡನೆಟ್ಟಿ ಬೆನ್ ಬಲಿದ ಗೋಣ್ ಕಿಱಿಪಾಱುವ ದಾಡೆ ತಳ್ತಗು
ರ್ವಿಸೆ ಮಲೆದುರ್ಕಿ ಗರ್ಜಿಸಿ ಕರಂ ಪರಿತಂದುದು ಪಂದಿ ಕಾಯ್ಪಿನಿಂ

ಷಡಕ್ಷರಿ ಕುಶಲ ಚಿತ್ರಗಾರನೆನ್ನುವುದಕ್ಕೆ ಮತ್ತೊಂದು ನಿದ
ರ್ಶನವನ್ನು ಕೊಡಬಹುದು. ಸಂತಾನ ವಿಹೀನತೆಯಿಂದುಂಟಾದ
ದುಃಖದಿಂದ ಕೊರಗುತ್ತಿದ್ದ ನಲ್ಲೆಯನ್ನು ನೋಡಲು
ಸತ್ಯೇಂದ್ರ ಅಂತಃಪುರಕ್ಕೆ ಬರುತ್ತಾನೆ. ಆಗ ರಾಣಿ ಅಮೃತ
ವತಿ ಎದ್ದು ನಿಂತು ಗೌರವಿಸಿದ ಬಗೆಯನ್ನೂ ಆ ನಿಲವಿನಲ್ಲಿ

ವ್ಯಕ್ತವಾಗುತ್ತಿದ್ದ ಅವಳ ಭಾವಗಾಂಭೀರ್ಯವನ್ನೂ ಕವಿ ಮನೋಜ್ಞವಾಗಿ ವರ್ಣಿಸಿದ್ದಾನೆ:

ಎಡಗೈಯಿಂದೊತ್ತಿ ಶಯ್ಯಾತಳಮನಿನಿಸು ಜಾರಿರ್ದುದಂ ಮೇಲುದಂ
ಪೊಂ
ಗಡಗಂ ಗಲ್ಕೆಂದು ಶಬ್ದಂಗುಡೆ ಬಲದ ಕರಾಂಭೋಜದಿಂದೇರ
ನೂಂಕು
ತ್ತೊಡನುತ್ತುಂಗಸ್ತನಾಗ್ರಕ್ಕಿಳಿವ ಮುಡಿಯನಾಂತೌಂಕುತಂ
ಕಂಠದಿಂ ಮುಂ
ಗಡೆಯೊಳ್ ಕಂಡೇಳ್ವಳಂ ಕೈವಿಡಿದವಳೊಡನರ್ಧಾಸನಂ ಗೊಂಡ
ನಾಗಳ್

ಷಡಕ್ಷರಿ ತನ್ನ ಕಾವ್ಯಗಳಲ್ಲಿ ನವರಸಗಳನ್ನು ಅಭಿವ್ಯಕ್ತಗೊಳಿಸಲು ಪ್ರಯತ್ನಿಸಿದ್ದಾನೆ. ಆದರೆ ಇತರ ರಸಗಳಿಗಿಂತ ಶೃಂಗಾರಕ್ಕೇ ಅಗ್ರಪೂಜೆ; ಅದರ ಕಡೆಗೇ ಕವಿಯ ಒಲವು; ಅಷ್ಟೇ ಅಲ್ಲ ಶೃಂಗಾರವೇ ಸರ್ವತ್ರ ತಾಂಡವವಾಡುತ್ತದೆ. ಶೃಂಗಾರವೊಂದೇ ಸರ್ವರಸಗಳಿಗೂ ಮೂಲ ಎಂಬಂತೆ, ಅದೇ ಜೀವನ ಸರ್ವಸ್ವ ಎಂಬಂತೆ ಕಾವ್ಯಗಳಿಂದ ವ್ಯಕ್ತಪಡುತ್ತದೆ. ಸಮಯ ಸಿಕ್ಕಿದಾಗಲೆಲ್ಲ, ಔಚಿತ್ಯಾನೌಚಿತ್ಯವನ್ನೂ ಗಮನಿಸದೆ, ಪುನರುಕ್ತಿಯಾದರೂ ಸರಿಯೆ, ಸ್ತ್ರೀಯರ ಅಂಗಾಂಗಗಳನ್ನು ವರ್ಣಿಸುವುದರಲ್ಲಿ ತಲ್ಲೀನನಾಗುತ್ತಾನೆ. ಕೋಗಿಲೆಯ ಹಾಡು ಗಿಳಿಯ ಮಾತು, ಮಾವಿನ ಹೂವು, ಶಿಶಿರ ಋತು, ಉಪವನ, ಮಂದ ಮಾರುತ, ಹೂಬಳ್ಳಿ, ಗಂಡು ಹೆಣ್ಣು ಹಕ್ಕಿಗಳು, ಬೆಳುದಿಂಗಳು—ಎಂಥದೋ ನೆಪ ದೊರೆತರೆ ಸಾಕು ಕವಿಯ ಕಲ್ಪನೆ ರೆಕ್ಕೆಗೆದರುತ್ತದೆ; ಲೇಖಣಿ ಲೀಲಾಜಾಲವಾಗಿ ಓಡುತ್ತದೆ; ಮಸಿ ಅಕ್ಷಯವಾಗುತ್ತವೆ; ವೃತ್ತಕಂದಗಳು ಮಾಲೆ ಮಾಲೆಯಾಗಿ ನುಗ್ಗಿ ಬರುತ್ತವೆ. ಕವಿಯ ಕಾಲದ ಅಭಿರುಚಿಗೆ

ಇಂಥ ವರ್ಣನೆಗಳು ಸಮ್ಮತವಾಗಿದ್ದಿರಬಹುದಾದರೂ, ನವೀನಾಭಿರುಚಿಗೆ ಅವು ಒಗ್ಗಲಾರವು. ಏಕೆಂದರೆ ಜಾಮೂನು ರಸಿಕ ರಸನೆಗೆ ಬಹು ಪ್ರಿಯವಾದರೂ, ಮಿತಿಮೀರಿದಾಗ ಅಸಹ್ಯವಾಗಿ ವಮನಕಾರಿಯಾಗುತ್ತದೆ. ಅಲ್ಲದೆ ಸೌಂದರ್ಯದ ಸೊಗಸು ಮುಚ್ಚುನುಡಿಯಲ್ಲಿ ಧ್ವನಿತವಾಗುವಂತೆ ಬಿಚ್ಚುನುಡಿ ಯಲ್ಲಿ ಆಗಲಾರದು. ಸ್ಥಾನ ಸಮಯಗಳ ಔಚಿತ್ಯವನ್ನು ಅತಿ ಕ್ರಮಿಸದಿರುವಾಗ ಶೃಂಗಾರ ರಸ ಸಹಜವಾಗಿ ಸುಂದರವಾಗಿ ಅಭಿವ್ಯಕ್ತಗೊಂಡು ಆಸ್ವಾದನೀಯವಾಗುತ್ತದೆ. ಆಗ ಕವಿಯ ರಸನಿರೂಪಣಾ ಕೌಶಲ ಎದ್ದು ಕಾಣುತ್ತದೆ. ನಿದರ್ಶನಾರ್ಥ ವಾಗಿ ಸರ್ವಮಂಗಳೆಯ ವರ್ಣನೆಯಲ್ಲಿ ಬರುವ ಪದ್ಯ ವೊಂದನ್ನು ಉದ್ಧರಿಸಬಹುದು. :

ತಾವರೆಯಲ್ಲಿ ತಾರೆ ಜನನಂ ಬಡೆದಂದು ನಗೇಂದ್ರಮೂಲದೊ
ಳ್ಬಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿ ಪುಟ್ಟದಂ
ದಾ ವಿಧು ಬಿಂಬಮಿಂಬವಳಮಂ ಪಡೆದಂದು ತದಗ್ರದಲ್ಲಿ ಭೃಂ
ಗಾವಳಿ ಮೂಡಿದಂದು ಸತಿಯಂಗಮನಾಂ ಪೊಗಳಲ್ಕೆ ಸಾಲ್ವಪೆಂ

ಪಡೆಯದುದಂ ಮುಂ ಪಡೆದಂ
ಜಡಜಭವಂ ಜಡನೆನಿಪ್ಪ ನುಡಿಯ ತೊಡಂಕಂ
ಬಿಡಿಸಲೊಡಚ್ಚಿರ್ದನೆಂದೆನೆ
ಮಡದಿಯ ದಿವ್ಯಾಂಗಮೇಂ ಮನಂಗೊಳಿಸಿದುದೋ

ಇಲ್ಲಿ ಬಳಸಿರುವ ನೂತನ ಪ್ರತಿಮೆ ಮತ್ತು ಉಕ್ತಿವಿಧಾನ ಕವಿಯ ಕಲ್ಪನಾಚಾತುರ್ಯಕ್ಕೆ ಸಾಕ್ಷಿಯಾಗಿವೆ, ರಸಾಭಿವ್ಯಕ್ತಿಗೆ ಅನುಕೂಲವಾಗಿವೆ. ಪ್ರತಿಮೆ ಹಳೆಯದಾದರೂ, ಅದನ್ನು ಬಳಸುವ ರೀತಿಯಿಂದ, ಅದು ವಿಶಿಷ್ಟವಾಗುತ್ತದೆ, ಸೌಂದರ್ಯ ದ್ಯೋತಕವಾಗುತ್ತದೆನ್ನುವುದನ್ನು ಇಲ್ಲಿ ಕಾಣಬಹುದು.

ಷಡಕ್ಷರಿಯ ಕಾವ್ಯಗಳಲ್ಲಿ ಶೃಂಗಾರ ರಸ ಅದ್ದೂರಿಯಿಂದ ಮೆರೆದರೂ, ಅಲ್ಲಲ್ಲೆ ವೀರ ಶಾಂತ ಕರುಣರಸಗಳ ವಿರಾಮ ಸ್ಥಾನಗಳು ಸಾಕಷ್ಟು ಬರುತ್ತವೆ. ಅರ್ಜುನ ಕಿರಾತರೂಪದ ಈಶ್ವರನ ಮೇಲೆ ಬಾಣಪ್ರಯೋಗ ಮಾಡಿದ ಸಂದರ್ಭದಲ್ಲಿ ವೀರರಸ ಹೇಗೆ ವ್ಯಕ್ತವಾಗುತ್ತದೆನ್ನುವುದನ್ನು ನೋಡಬಹುದು:

ಪಟುಕೋಪಾಟೋಪ ಬದ್ಧ ಭ್ರುಕುಟಿ ವಿಚಳಿತಶ್ಮಶ್ರು
ಘರ್ಮಾಂಬುಭಾಸ್ವ
ನ್ನಿಟಿಲಂ ಶೋಣಾಕ್ಷಿಕೋಣಂ ಪೆದೆಯನೆಟಿದು ಗಾಂಡೀವದೊಳ್
ತೊಟ್ಟು ರೌದ್ರೋ
ತ್ಕಟವೃತ್ತಂ ಜ್ಯಾರವಂಗೆಯ್ದುಡಸಿ ಪಿಡಿದು ಸಂದಾರ್ದು ಶಾತಾಸ್ತ್ರ
ಮಂಸಂ
ಘಟಿಸುತ್ತುಂ ಮಾಣದೆಚ್ಚಂ ಕಪಟಶಬರನಂ ಕೋಪಿಸುತ್ತಣ್ಮಿ
ಪಾರ್ಥಂ

ಮಹಾಸ್ರಗ್ಧರೆಯ ಬೀಸು ಬಿತ್ತರಗಳು ಮತ್ತು ಓಜೋನ್ವಿತ ವಾದ ಪದಪುಂಜಗಳು ರಸಸಿದ್ಧಿಗೆ ಪೋಷಕವಾಗಿವೆಯೆಂದು ಹೇಳಬೇಕಾಗಿಲ್ಲ.

ಮೊದಲೇ ನೋಡಿದಂತೆ ಶಿವಪಂಚಾಕ್ಷರೀಮಹಿಮೆಯ ಸ್ಥಾಪನೆ, ಶರಣಸಂಕೀರ್ತನೆ, ಶಿವಲೀಲಾವರ್ಣನೆ—ಇವು ಕಾವ್ಯ ರಚನೆಯ ಗುರಿ. ಆದುದರಿಂದ ಭಕ್ತಿಯ ವಿವಿಧರೂಪಗಳನ್ನು ಅವಸ್ಥಾಂತರಗಳನ್ನು ಮತ್ತು ಛಾಯಾಭೇದಗಳನ್ನು ಇಲ್ಲಿ ನಿರೀಕ್ಷಿಸುವುದು ಸಹಜ. ಸಂಗಯ್ಯ ಮತ್ತು ಬಿಜ್ಜ ಮಹಾ ದೇವಿಯರ ಜೀವನ ಮುಗ್ಧಭಕ್ತಿಗೆ ಹೇಗೆ ಸಂಕೇತವಾಗಿವೆ ಎಂಬುದನ್ನು ಮೇಲೆ ಕಾಣಿಸಿದೆ. ವೃಷಭೇಂದ್ರ ವಿಜಯದಲ್ಲಿ ಬರುವ ಅನೇಕ ಶರಣರ ಜೀವನದಲ್ಲಿ ಭಕ್ತಿಯ ನಾನಾ ಮುಖ ಗಳನ್ನು ಗುರುತಿಸಬಹುದು. ಕಾವ್ಯಗಳ ಉದ್ದಕ್ಕೂ ಬರುವ

ಪ್ರಾರ್ಥನಾ ರೂಪದ ಪದ್ಯಗಳು ತುಂಬ ಸುಂದರವಾಗಿ ಭಕ್ತಿ ಭಾವವನ್ನು ಪ್ರಚೋದಿಸುತ್ತವೆ. ಆದರೆ ಹರಿಹರನ ಕಾವ್ಯ ಗಳಲ್ಲಿ ಕಾಣುವ ಕಾವು, ಅಲ್ಲಿಯ ವೈವಿಧ್ಯ, ಅಲ್ಲಿಯ ಆವೇಶ ಇಲ್ಲಿ ವ್ಯಕ್ತಗೊಂಡಂತೆ ಕಾಣುವುದಿಲ್ಲ. ಬಸವೇಶ್ವರ ಕಪ್ಪಡಿಗೆ ಬಂದ ಸಂದರ್ಭ ಎರಡು ಕಾವ್ಯಗಳಲ್ಲಿ ಹೇಗೆ ಚಿತ್ರಿತವಾಗಿದೆ ಯೆಂಬುದನ್ನು ಹೋಲಿಸಿ ನೋಡಿದರೆ ಈ ಮಾತಿನ ಸತ್ಯಾಂಶ ಹೊಳೆಯದಿರದು. ಆದರೂ ಷಡಕ್ಷರಿ ಸ್ವಯಂಯತಿಯಾದುದ ರಿಂದ ಅವನಿಗೆ ಭಕ್ತಿಯ ಸ್ವರೂಪ, ಅದು ಮೈದೋರುವ ರೀತಿ ಚೆನ್ನಾಗಿ ಗೊತ್ತಿತ್ತೆಂಬುದು ಕೆಳಗಣ ನಿದರ್ಶನದಿಂದ ಸ್ಪಷ್ಟ ವಾಗುತ್ತದೆ.

ತನು ರೋಮಾಂಚಮನೊಂದೆ ಮುಂದೆ ನಯನಾನಂದಾಶ್ರುಗಳ್ ಜಾರೆ ತೋ
ರೆ ನವಂ ಗದ್ಗದಮುಣ್ಮೆ ಪೊಣ್ಮೆ ನಡುಕಂ ಘರ್ಮಾಂಬು ಕೈಗಣ್ಮೆ ಜಾ
ಗ್ರ ನಿತಾಂತಂ ದೃಢಯೋಗ ರಾಗರಸದಿಂ ಚಿತ್ತಾಬ್ಧಿ ನೀರೇರೆ ಮಾ
ರೆ ನರೇಂದ್ರಂ ಶಿವಲಿಂಗಸಂಗರತಿಯಂ ತಳ್ತಪ್ಪಿದಂತೊಪ್ಪಿದಂ

ಕರಣಂಗಳ್ಕಳೆಯೇರೆ ಕೌತುಕರಸಂ ಪೆಂಪೇರೆ ರೋಮಾಂಚನಂ
ಕರಕಂಪಂ ಸುಖಬಾಷ್ಪಮುಣ್ಮೆ ಮಣಿದಾನಂದಾಬ್ಧಿ ಮೆಯ್ವೆರ್ಚೆ ಶಂ
ಕರ ಸರ್ವೇಶ್ವರ ಸಂಗಮೇಶ್ವರ ಮದೀಯಾತ್ಮೇಶ ನಿನ್ನಂಘ್ರಿ ಪಂ
ಕರುಹಂ ಗಂಡು ಕೃತಾರ್ಥನಾದೆನೆನುತಂ ಕೊಂಡಾಡಿದಂ ಭಕ್ತಿಯಿಂ

## ೭ ಎರಡು ಸಂದರ್ಭಗಳು

ಷಡಕ್ಷರಿಯ ಕಾವ್ಯ ಶ್ರೀ ರೋಹಣಗಿರಿಯ ಚಿಂತಾರತ್ನ ಗಳಂತಿರುವ ಎರಡು ಸಂದರ್ಭಗಳನ್ನು ಯಾರೂ ಮರೆಯ ಲಾರರು—ಒಂದು ಅಮೃತವತಿಯ ಪುತ್ರದೋಹದ ಪ್ರಕರಣ, ಮತ್ತೊಂದು ತಿರಿಕೊಳವಿನಾಚಿಯ ಪ್ರಸಂಗ. ಒಂದರಲ್ಲಿ

ಶೃಂಗಾರ-ಕರುಣರಸಗಳು ಸಂಗಮವಾಗಿ ಪ್ರೈಡೋರಿಜರೆ ಮತ್ತೊಂದರಲ್ಲಿ ಕರುಣರಸದ ಊಟೆಯನ್ನೆ ಕಾಣಬಹುದು. ಮಕ್ಕಳ ಮೇಲೆ ಕವಿಗೆ ತುಂಬ ಮಮತೆ; ಅವುಗಳ ಲೀಲೆಯನ್ನು ನಾನಾ ಭಂಗಿಗಳಲ್ಲಿ, ನಾನಾ ಅವಸ್ಥೆಗಳಲ್ಲಿ ನೋಡಿ ಆನಂದ ಪಟ್ಟಿದ್ದಾನೆ; ತಾಯಿಗೆ ಮಗುವಿನ ಮೇಲಿರುವ ನಿಸ್ವಾರ್ಥ ವಾತ್ಸಲ್ಯವನ್ನು ಕಂಡು ಮೆಚ್ಚಿದ್ದಾನೆ; ಕುಣಿಸಿ, ನಗಿಸಿ, ಅಳಿಸಿ, ಕೆರಳಿಸಿ, ಕುತೂಹಲಗೊಳಿಸಿ, ಕಾಯಕ್ಲೇಶ ಮನಃಕ್ಲೇಶ ಗಳನ್ನು ಹೋಗಲಾಡಿಸಿ, ಆನಂದೋತ್ಸಾಹಗಳಿಗೆ ಕಾರಣ ವಾಗಿ, ಸುಂದರ ಸ್ವಪ್ನಾನುಭವಗಳಿಗೆ ಉಗಮಮೂಲವಾಗಿ, ಬದುಕನ್ನು ಹೂವಿನಂತೆ ಹಗುರಗೊಳಿಸುವ ಹಸನಗೊಳಿಸುವ ಹಸುಗೂಸಿಗೆ ಹಠಾತ್ತನೆ ಬೇನೆ ಬಡಿದರೆ, ಸಾವು ಸಮನಿಸಿದರೆ ಯಾರ ಹೃದಯ ತಾನೆ ಕರಗಿ ನೀರಾಗುವುದಿಲ್ಲ? ಅದರಲ್ಲಿಯೂ ಕವಿಹೃದಯ ಮಿಡಿಯದಿರುತ್ತದೆಯೆ? ರಾಜಶೇಖರ ವಿಳಾಸದಲ್ಲಿ ಬರುವ ಈ ಎರಡು ಸಂದರ್ಭಗಳಲ್ಲಿ ಕವಿಹೃದಯ ಹೇಗೆ ಪ್ರತಿಬಿಂಬಿತವಾಗಿದೆಯೆಂಬುದನ್ನು ನೋಡಬಹುದು.

**ಪುತ್ರದೋಹದ :** ಅಮೃತವತಿ ಸಕಲ ವೈಭವೋಪೇತ ಳಾಗಿ ಸರ್ವಾಂಗಸುಂದರಳಾಗಿ ಶಿವಧ್ಯಾನೈಕಪರಾಯಣೆಯಾಗಿ ಪತಿಗನುಕೂಲೆಯಾಗಿದ್ದರೂ ಬಹಳ ದಿನಗಳ ತನಕ ಮಕ್ಕ ಳಾಗುವುದಿಲ್ಲ. ಒಂದು ದಿನ ಶಿವಲಿಂಗಪೂಜಾನಂತರ ಮಾರ್ಕಂಡೇಯ ಚರಿತವನ್ನು ಕೇಳಿ, ಅಲ್ಲಿ ಬರುವ ಬಾಲಲೀಲಾ ವರ್ಣನೆಯನ್ನು ನೆನೆದಾಗ, ಅವಳಲ್ಲಿ ಮಕ್ಕಳ ಬಯಕೆ ಮೂಡುತ್ತದೆ; ಅದು ಕ್ರಮೇಣ ತೀಕ್ಷ್ಣವಾಗಿ, ಮಕ್ಕಳಿಗಾಗಿ ಹಂಬಲಿಸಿ ಹಲುಬುತ್ತಾಳೆ. ದಾಂಪತ್ಯದ ಮತ್ತು ಯೌವನದ ಪರಮೋದ್ದೇಶ ಮತ್ತು ಚರಮ ಗಂತವ್ಯ ಪುತ್ರಸಂತಾನ;

ಅದಿಲ್ಲದ ಬಾಳು ನಿಷ್ಫಲವೆಂದು ಕೆಳದಿಯೊಡನೆ ಹೇಳಿಕೊಂಡು ಸಂತಾಪ ಪಡುತ್ತಾಳೆ.

ಎಳವರೆಯದೊಳೆಳೆಯರ್ಕಳ
ನೆಳಸುತೆ ನಳಿತೋಳ್ಗಳಿಂದೆ ಬಿಗಿದಪ್ಪಿ ಮನಂ
ಗೊಳೆ ತಳ್ತು ನೋಡಿ ಮುದ್ದಿಪ
ವಿಳಾಸಮೊಂದಕ್ಕೆ ನೋಂತುದಿಲ್ಲಾಂ ಕೆಳದೀ

ಅವಳಿಗೆ 'ಬೇಕು' ಎನ್ನುವ ಭಾಗ್ಯವಾವುದೂ ಇಲ್ಲ; ಎಲ್ಲವೂ ಇದೆ. ಆದರೆ 'ಒಂದು' ಮಾತ್ರ ಇಲ್ಲ. 'ಒಂದಕ್ಕೆ ನೋಂತುದಿಲ್ಲಾಂ ಕೆಳದೀ' ಎನ್ನುವ ಪದಪುಂಜದಲ್ಲಿ ಅವಳ ಸಂಕಟದ ಅಪಾರತೆ ಧ್ವನಿತವಾಗಿದೆ. ಮಕ್ಕಳ ಬಾಲಲೀಲೆಯನ್ನು ನೆನೆದು

ಅರಳೆಲೆ ಮಾಗಾಯ್ಕುಣಿಯು
ತ್ತಿರೆ ಸುಣ್ಣೊಸಲೊಳ್ಕದಂಪಿನೊಳ್ಮೃದುಹಾಸ
ಸ್ಫುರಿತಂ ಮೊಳೆವಲ್ಮಿನುಗು
ತ್ತಿರೆ ಪರಿದಾಡುವ ಕುಮಾರನೆಂದಾದಪನೋ

ಕರತಳದಿಂದೆನ್ನಯ ನು
ಣ್ಬೆರಲಂ ಪಿಡಿದೆಳ್ದು ಜನನಿ ನಡೆದಪೆನೆನುತೊಂ
ದೆರಡಡಿಯನಿಟ್ಟು ನಿರಿಯಂ
ಭರದಿಂ ತಳ್ಕೈಪ ಮಗನನೆಂದೀಕ್ಷಿಪೆನೋ

ಅರಸನ ಪಿಂದೆಸೆಯೊಳ್ ಪೈ
ಗರೆದೆಲ್ಲಿರ್ದಪೆನೊ ಜನನಿ ಪೇಳೆನುತೊಲ್ಪಿಂ
ಪರಿತಂದೆಳನಗೆ ಮಿಸುಗು
ತ್ತಿರೆ ಕುವರಂ ಕೊರಲನೆಂದು ಬಿಗಿದಪ್ಪಪನೋ

ಅನುಭವದ ಸಂಸ್ಕಾರವಿರುವವನಿಗೆ ಇಲ್ಲಿಯ ಒಂದೊಂದು ಪದವೂ ಭಾವಕೋಶದ ವಿದ್ಯುತ್ಕೇಂದ್ರವಾಗುತ್ತದೆ; ಒಂದೊಂದು ಪದಪುಂಜವೂ ಹೃದಯ ಸಾಗರದಲ್ಲಿ ಭಾವವೀಚಿಯನ್ನೆಬ್ಬಿಸುತ್ತದೆ. ಮಗು ಆಡಿದ್ದೆಲ್ಲ ಲೀಲೆ; ಮಾಡಿದ್ದೆಲ್ಲ ಮಾಟ. ಅದರ ತೊದಲು ಮಾತು, ಸುರಿವ ಜೊಲ್ಲು, ತಿಪ್ಪಹೆಜ್ಜೆ, ನುಣ್ಗದಪು, ಮೊಳೆವಲ್ಲು, ನಳಿತೋಳು ಒಂದೊಂದೂ ಪಡೆದವರಿಗೆ ರೋಮಾಂಚನಕಾರಿಯಾಗುತ್ತದೆ. ಬಾಲಲೀಲೆಯ ವರ್ಣನೆಯಲ್ಲಿಯೆ ಕವಿ ಅದರ ವಿಕಾಸಕ್ರಮವನ್ನೂ ಸೂಚಿಸುತ್ತಾನೆ. ಬಾಲಕೇಳಿಯನ್ನು ನೋಡಿದಾಗ ಯಾರಿಗಾದರೂ ಸರಿಯೆ—ಹೆಂಗಸಾಗಲಿ ಗಂಡಸಾಗಲಿ—ಮೇಲಣ ಅನುಭವವಾಗುವುದು ಸಹಜ. ಹಡೆದ ತಾಯಿಯ ಅನುಭವವಂತು ವಿಶಿಷ್ಟವಾದುದು, ವಾಗತೀತವಾದುದು:

> ಮಗನಂ ತಳ್ತಮರ್ದಪ್ಪಿ ನೋಡಿ ಮೊಗಮಂ ಮುಂಡಾಡಿ
>
> ನೇಹಂ ಮನಂ
>
> ಬಗೆ ಮಾತಾಡಿಸಿ ಅಲ್ಲೆಗೈದು ನಗಿಸುತ್ತಿರ್ಕೈಗಳಿಂ ಸಾರ್ಚಿ ಮಂ
>
> ಡೆಗೆ ಬಟ್ಟಾಡೆ ಕೆಲಕ್ಕೆ ಚಿಮ್ಮಿ ಮೊಲೆವಾಲಂ ಮತ್ತೆ
>
> ಬಾಯ್ಗೂಡಿ ಮೆ
>
> ಲ್ಲಗೆ ತೊಟ್ಟಲ್ಗಿರದಿಟ್ಟು ತೂಗುವೆಳವೆಣ್ಣೇಂ ನೋಂಪಿಯಂ
>
> ನೋಂತಳೋ

‘ತನುವಲ್ಲಿಗೆ ಫಳಮಾವುದೊ? ತನಯಂ’; ಆ ತನಯನನ್ನು ಪಡೆಯದ ತನುವಲ್ಲಿ ವಿಫಲವೆಂದುಕೊಳ್ಳುವ ತಾಯಿಯರ ಮನೋವೇದನೆ ಊಹಾತೀತ. ಅಂಥ ಹೆಣ್ಣು ತನ್ನನ್ನೇ ತಾನು ಹಳಿದುಕೊಳ್ಳುತ್ತಾಳೆ:

ಪಲವಾಳಾಪದೊಳೇನೊ ಚೆಲ್ವಣುಗನಂ ಕಟ್ಟಕ್ಕರಿಂದೆತ್ತಿ ಪೆಂ
ಪಲರ್ವಣ್ಣಂ ಬಿಗಿದಪ್ಪದಿರ್ದ ನಳಿದೋಳ್ಗಳ್ತಾಂ ಬಂಜೆದೋಳ್
ನೋಡದಿ
ಪರಿಪರ್ಣಣ್ಣಾಂ ಬಲಿಗಣ್ಸರಾಗರಸದೊಳ್ಪಂ ಬೀರುತಂ
ಜೋಗುಳಂ
ನಲವಿಂ ಪಾಡದ ಪೆಣ್ಣು ಬಾಯ್ಬಿಲದ ಬಾಯ್ತಾನೆಂದೊಡೇಂ
ಸಾಲದೇ

ಹೆಂಗರುಳ ಸಂಕಟ ಗಂಡೆದೆಯನ್ನೂ ಕರಗಿಸುತ್ತದೆ; ಗಂಡ ಹೆಂಡತಿಯರಿಬ್ಬರೂ ಸಮದುಃಖ ಭಾಗಿಗಳಾಗಿ "ಅರ್ಭಕನಾಡ ದಂಗಳಂ ಮಂಜುಳಮೇ?" "ತೆನೆಯಿಲ್ಲದ ನವ ಪಲಾಲದಂತಿರೆ ತನಯನಂ ಪಡೆಯದೆ ಬಾಳ್ವನ ಸಂಸಾರಮಸಾರಂ" ಎಂದು ಕೊರಗುತ್ತಾರೆ.

**ತಿರಿಕೊಳನಿನಾಚಿ :** ಹೀಗೆ ಬಯಸಿ ಬಯಸಿ, ಶಿವನನ್ನು ಬೇಡಿ ಕಾಡಿ ಪಡೆದ ಮಗ ಅಕಾಲ ಮರಣಕ್ಕೆ ತುತ್ತಾದರೆ ತಂದೆತಾಯಿಯರ ದುಃಖ ಹೇಳತೀರದು; ಅದರಲ್ಲಿಯೂ ಆರು ಮಕ್ಕಳನ್ನು ಮೊದಲೇ ಕಳೆದುಕೊಂಡು, ತನ್ನ ಮುಂದಿನ ಭವಿಷ್ಯವನ್ನು ಉಳಿದೊಬ್ಬ ಮಗನಲ್ಲಿ ಕಂಡು, ತನ್ನ ಸರ್ವಸ್ವವನ್ನೆಲ್ಲ ಸೂರೆಮಾಡಿ ಸಾಕಿಸಲಹಿದ ಮಗುವೂ ತೀರಿಕೊಂಡಾಗ ತಿರಿಕೊಳನಿನಾಚಿಯಂಥ ವಿಧವೆಯ ಗೋಳು ಕೇಳಬೇಕೆ? ಅಂಥ ತಾಯಿಯ ಮನಃಸ್ಥಿತಿಯನ್ನು ಗ್ರಹಿಸಿ ಅನುಭವಿಸಿ ಕವಿ ಅತ್ಯಂತ ಕರುಣಾಜನಕವಾದ ಅಪೂರ್ವ ದೃಶ್ಯವನ್ನು ಚಿತ್ರಿಸಿದ್ದಾನೆ.

ವೈರಾಳಿಯಿಂದ ರಾಜಶೇಖರ ಹಿಂದಿರುಗುವ ಸಮಯದಲ್ಲಿ ಮಂತ್ರಿಪುತ್ರ ಮಿತವಚನನ ಕುದುರೆಯ ಗೊರಸುಗಳಿಗೆ ಜನಸಂದಣಿಯ ನಡುವೆ ಕಾಲಿಡವಿ ಬಿದ್ದ ತಾಯನ್ನು

ಕರೆಕರೆವಳುತ್ತಿದ್ದ ಪಂಚವರ್ಷದ ಶಂಕರ ಸಿಕ್ಕಿ ಮರ ಣೋನ್ಮುಖನಾಗುತ್ತಾನೆ. ನೀರಿಗೆ ಹೋಗಿ ಮನೆಗೆ ಹಿಂದಿರುಗಿದ ತಾಯಿ ಮಗನನ್ನು ಕಾಣದೆ "ಲಲಿತ ಮಂದ ಹಾಸ ಲಲಿತಸ್ಖಲದಕ್ಷರವಾಣಿ ಗೆಜ್ಜೆ ಮೆಲ್ಲುಲಿಗುಡೆ ಬಂದು ಬಳ್ಳಿರಿಯನಪ್ಪದೆ" ಎಲ್ಲಿ ಹೋದೆ ಎಂದು ಏರಿದ ದನಿಯಿಂದ ಕೂಗಿ ಕರೆಕರೆದು ಕಾಣದೆ ಕಳವಳಿಸಿ ಬೀದಿಗೆ ಬರುತ್ತಾಳೆ. "ಇನಿವಾತಿನ ನೀರನೆಲ್ಲಿದಂ ಮೆಲ್ನಗೆಯಿಂಪಿನ ಸೊಬಗನೆಲ್ಲಿದಂ" ಎಂದು ಹಲುಬುತ್ತಾಳೆ. ನರೇಂದ್ರ ತುರಗಖುರ ಹತಿಯಿಂದ ಮಡಿದನೆಂದು ಬೀದಿಯ ಜನ ಮಗುವಿನ ರುಂಡಮುಂಡಗಳನ್ನು ತೋರುತ್ತಾರೆ. ಒಡನೆಯೆ ತಾಯಿ ಮುಂದುಗೆಟ್ಟು, ಕೆಟ್ಟೆ ಕೆಟ್ಟೆನೆಂದು ಗೋಳಿಡುತ್ತ ಬಸಿರನ್ನು ಹೊಸೆದು 'ಎಳಗಿಳಿ ಯನ್ನು ಕೊರಳ್ಮುರಿದು ಯಾರು ಬಿಸಾಡಿದರು' ಎಂದು ದೆಸೆದೆಸೆಗೆ ಬಾಯಿಬಿಟ್ಟು ರೋದಿಸುತ್ತಾಳೆ. ನೀರು ತುಂಬಿದ ಕಣ್ಣಿಂದ ಶಿಶುಶವವನ್ನು ನೋಡುತ್ತ, ಶಿಶು ಮುಖದ ಧೂಳಿ ಯನ್ನು ಸೆರಗಿನಿಂದೊರಸಿ, ಕೆಲಕ್ಕೆ ಸರಿದ ಮಾಂಗಾಯ್ ಅರಳೆಲೆಗಳನ್ನು ಸರಿಮಾಡಿ, ಗಲ್ಲವನ್ನು ಹಿಡಿದು ಮೆಲ್ಲ ನಲುಗಿಸಿ ಮುಂಡಾಡಿ ಮುದ್ದಾಡಿ ಹಲವರಿಯುತ್ತಾಳೆ.

ಎಲ್ಲಿಯ ಹಯಮೆಲ್ಲಿಯ ನೃಪ<br>
ನೆಲ್ಲಿಯ ಪೈಹಾಳಿಯೆಲ್ಲಿಯತಿ ಕಳಕಳಮಿಂ<br>
ತೆಲ್ಲಿಯ ದರ್ಶನಗಮನಮಿ<br>
ದೆಲ್ಲಿಯ ಮೃತಿ ನಿನಗೆ ಬಂದುವೆಲೆ ಸುಕುಮಾರಾ

ಗಳಗಳನೆ ಬಳೆದು ಧನಮಂ<br>
ಗಳಿಸಿ ಚರಾರ್ಚನೆಯನೆಸಗಿ ಹರಕೃಪೆವಡೆದು<br>
ಜ್ವಳ ಸುಖಮನೀವನೆಂದಿರೆ<br>
ತಿಳಿವಿಲ್ಲದೆ ಮಗನೆ ತುರಗಹತಿಯಿಂ ಮಡಿದೈ

ಕೊರಲಂ ಮೆಟ್ಟುವ ಪದದೊಳ್
ತುರಗಂ ಕಂಗೆಟ್ಟು ಜನನಿಯೆಂದೆನ್ನಂ ನೀಂ
ಕರೆದೆಯೊ ಮರೆದೆಯೊ ದೋಷಾ
ಕರೆಯೆಂದೇಂ ತೊರೆದೆಯೋ ತನೂಜನೆ ಪೇಳೈ

ಹೀಗೆ ಹಲವು ವಿಧವಾಗಿ ಪ್ರಲಾಪಿಸಿ, ಅತ್ತು ಅತ್ತು ಸಾಕಾಗಿ ಬಸವಳಿದು ಮತ್ತೆ ಚೇತರಿಸಿಕೊಂಡು ಕಳೇವರವನ್ನು ಮನೆಗೆತ್ತಿಕೊಂಡು ಹೋಗಿ ರುಂಡ ಮುಂಡಗಳನ್ನು ಸೇರಿಸಿ ನೋಡಿ ಸೈರಿಸಲಾರದೆ, ಮಗುವಿನ ಆಟಪಾಟಗಳನ್ನು ನೆನೆದುಕೊಂಡು ಬಾಯ್‌ಬಾಯ್ಬಡಿದುಕೊಳ್ಳುತ್ತಾಳೆ.

ಸರಿವರೆಯದ ಮಕ್ಕಳ್ ಶಂ
ಕರನೆಲ್ಲಿದನಾಡಲೆಂದು ಬೆಸಗೊಳಲೇನೆಂ
ದಿರದೆ ಮರುಮಾತುಗೊಟ್ಟಪೆ
ನರಸನ ಹಯದಿಂದೆ ಮಡಿದನೆಂಬೆನೆ ಮಗನೇ

ನೀನಾಡಿದೆಡೆಗಳಂ ಸುತ
ನೀನೊರಗಿದ ಪಾಸುವಂ ತನೂಭವ ಪದಪಿಂ
ನೀನುಂಡ ತಾಣಮುಮನಿ
ನ್ನಾನೆಂತೀಕ್ಷಿಸುವೆನೆಂತು ಸೈರಿಪೆಸಕಟಾ

ಮಗು ನಿಂತ ನೆಲ, ಕುಳಿತ ನೆಲೆ, ಆಡಿಪೆಡೆ, ಉಂಡ ಜಾಗ, ಮಲಗಿದ ತೊಟ್ಟಿಲು, ಉಟ್ಟ ಬಟ್ಟೆ, ಹೊದೆವ ಹಚ್ಚಡ, ಕುಡಿದ ಬಟ್ಟಲು, ಜೊತೆಯಾಡಿದ ಮಕ್ಕಳು–ಒಂದೊಂದೂ ಹೆತ್ತ ತಾಯಿಯ ಸ್ಮೃತಿಪಟಲದ ಮೇಲೆ ಸುಳಿದು ಅವಳ ಕರುಳನ್ನು ಹಿಚುಕುತ್ತವೆ, ಹೃದಯವನ್ನು ಹಿಂಡುತ್ತವೆ. ಹಂತಹಂತವಾಗಿ ಅತ್ಯಂತ ಜಾಗರೂಕವಾಗಿ ಭಾವದ ಏರಿಳಿತಗಳನ್ನು ಕವಿ ಸಾಧಿಸಿ, ರಸಸ್ಥಿತಿಗೆ ಕೊಂಡೊಯ್ಯುತ್ತಾನೆ. ಬಹುವಚನ

ಪ್ರಿಯನಾದ ಕವಿ ಇಂಥ ಸಂದರ್ಭವೊದಗಿದಾಗ ಮಿತವಚನ ನಾಗುತ್ತಾನೆ; ಪಾಂಡಿತ್ಯ ಪ್ರತಿಭೆಗೆ ಶರಣಾಗುತ್ತದೆ; ಅವನ ಮಾತು ತನ್ನ ಶ್ರೀಮಂತಿಕೆಯ ಅಟ್ಟಹಾಸವನ್ನುಳಿದು ಭಾವ ಕೋಶ ರಸಕೋಶಗಳ ವಾಹಕ ಶಕ್ತಿಯಾಗುತ್ತದೆ, ಪ್ರಣಾಳಿಕೆ ಯಾಗುತ್ತದೆ. ಕವಿ ನೊಂದ ತಾಯಿಯ ಬೆಂದ ಕರುಳಿನ ಬೇನೆಯನ್ನು ಚೆನ್ನಾಗಿ ಬಲ್ಲನು. ದುಃಖ ಪರಮಾವಧಿಯನ್ನು ಮುಟ್ಟಿದಾಗ ನಾಲಗೆ ಮುರುಟುತ್ತದೆ, ಕಣ್ಣೀರು ಬತ್ತುತ್ತದೆ, ಕರುಳೆದೆಗಳು ಮರಗಟ್ಟುತ್ತವೆ, ಚಲನೆಗೆ ಚಳಿ ಹಿಡಿಯುತ್ತದೆ, ಬಾಹ್ಯಪ್ರಜ್ಞೆಗೆ ಮಂಕು ಬಡಿಯುತ್ತದೆ. ತಿರಿಕೊಳವಿನಾಚಿಯ ಕೊನೆಯ ಮಾತುಗಳಲ್ಲಿ ಅವಳ ಬಾಳಿನ ಶೂನ್ಯತೆ ವ್ಯಕ್ತ ವಾಗುತ್ತದೆ:

ನೋಡುವ ಕಣ್ಣೊಡೆದುದು ಮಾ
ತಾಡುವ ನಾಲಗೆ ಮುರುಂಟಿದುದು ನಿನ್ನಂ ಮುಂ
ಡಾಡುವ ಕೈಯುಡಿದುದು ಸಲೆ
ಪಾಡುವ ಬಾಯ್ ಬೆಂದುದಣುಗ ನೀಂ ಮಡಿಯಲೊಡಂ

ಮಗನೆ ನೀನಿಂತಳಿಯೆ ಸೈರಿಪೆನೆಂತೊ ಪೇಳ್ಳೈ ಶಂಕರಾ
ಸುಗುಣನಿಧಿ ನೀನೆನ್ನ ಮೊರೆಗಳನೊರ್ಮೆ ಕೇಳ್ಳೈ ಶಂಕರಾ
ಪರಸಿ ಪಾಡಿ ಮಹೇಶನಿಂದವೆ ಬೇಡಿ ಮುನ್ನಂ ಶಂಕರಾ
ತುರಗ ಖುರಕೆಂದಕಟ ಪೆತ್ತೆನೆ ಕುವರ ನಿನ್ನಂ ಶಂಕರಾ

.......................................................

ನಿನ್ನಳಿವನೀಕ್ಷಿಸಿಯುಮೆನ್ನಸು ಪೋಗದಂದು ಶಂಕರಾ
ನಿನ್ನೊಳೆನ್ನಯ ಕೂರ್ಮೆ ನಿಜಮೆಂತೆನಿಪುದಿಂದು ಶಂಕರಾ
ಹರಣದಳಿವಿಂಗಂಜುವೆನೆ ನಿನ್ನಾಣೆ ಮಗನೇ ಶಂಕರಾ
ಶಿರವರಿದು ನಿನ್ನಂದವಾಗದೆ ಪಿಂಗಿದಪೆನೇ ಶಂಕರಾ

ತಿರಿಕೊಳವಿನಾಚಿ ಕೊನೆಗೆ ಶಿಶುಕಳೇವರವನ್ನು ಅರಮನೆಗೆ

ತೆಗೆದುಕೊಂಡು ಹೋಗಿ ರಾಜನ ಮುಂದಿಟ್ಟು ರೋದಿಸುತ್ತಾಳೆ. ಮುಂದೆ ದುರಂತದ ಮೇಲೆ ದುರಂತಪ್ರೊದಗುತ್ತದೆ. ಒಂದು ಶಿಸುವಿನ ತಲೆಗೆ ಒಂದಲ್ಲ ಏಳು ತಲೆಗಳು ಬಲಿಯಾಗುತ್ತವೆ. ಆದರೂ ಶಂಕರನ ಮರಣ ದೃಶ್ಯವಾಗಲಿ, ವಿಧವೆ ಮಾತೆಯ ಆಕ್ರಂದನವಾಗಲಿ ಎಂದೆಂದಿಗೂ ಮರೆಯುವುದಿಲ್ಲ.

## ೮ ಉಪಸಂಹಾರ

ಷಡಕ್ಷರದೇವ ಪ್ರಥಮತಃ ಪಂಡಿತ; ಅನಂತರ ಕವಿ. ಅವನ ದರ್ಶನ ಪ್ರತಿಭೆಗಳು ಪಾಂಡಿತ್ಯದ ಕವಚವನ್ನು ಧರಿಸಿ ಹೊರ ಬರುತ್ತವೆ. ಉತ್ತಮ ಕಾವ್ಯದ ಲಕ್ಷಣಗಳನ್ನು ಅವನು ಚೆನ್ನಾಗಿ ಬಲ್ಲ. ಕಾವ್ಯದ ಆತ್ಮ ರಸ ಎಂಬುದನ್ನು ಅವನು ಮನಗಂಡಿದ್ದನು. ಅಲಂಕಾರಗಳಂತು ಪುಂಖಾನುಪುಂಖವಾಗಿ ಅನೈಚ್ಛಿಕವಾಗಿ ಅವನ ಮೂಡಿಗೆಯಿಂದ ಹೊರಹೊಮ್ಮುತ್ತವೆ. ಕಲ್ಪನಾ ಚಮತ್ಕಾರದಲ್ಲಿ ಅವನು ಯಾರಿಗೂ ಕಡಿಮೆಯಲ್ಲ. ಅವನ ಶಬ್ದ ಭಂಡಾರ ಅತ್ಯಂತ ಶ್ರೀಮಂತವಾದುದು; ಆದರೆ ಸಂಸ್ಕೃತ ಭೂಯಿಷ್ಠ. ಕೆಲವು ಕಡೆಯಂತು ಅವನು ಬಳಸುವ ಭಾಷೆ ಪೂರ್ತಿ ಸಂಸ್ಕೃತ, ಕೊನೆಯಲ್ಲಿ ಮಾತ್ರ ಒಂದು ಸಣ್ಣ ಕನ್ನಡ ಕ್ರಿಯಾಪದ, ಇಲ್ಲವೆ ಒಂದು ಪ್ರತ್ಯಯ.

ಅಂಭಃಕುಂಭೀನ ಕುಂಭೀನ ಸಮುಕರ ಮುಹಾಕೂರ್ಮ ಕೀರ್ಣೋರ್ಮಿ
ಮಾಲಾ
ಜೃಂಭದ್ದಂಭೋಳಿ ಹಸ್ತಾಹತಚಕಿತಗತಕ್ಷ್ಮಾಧ್ರ ವಿಸ್ಫಾರ ವಿದ್ಯು
ತ್ಸಂಭಿಸ್ನಾಂಭೋಭೃದುದ್ಯತ್ತಟ ಚಟುಳ ಚಳನ್ಮೀನ ಫೇನ ಪ್ರತಾನಂ
ಶುಂಭದ್ಗಂಭೀರಿಮಂ ರಂಜಿಸಿದುದಮುದ ದತ್ತೇಂದ್ರ ಛದ್ರಂ ಸಮುದ್ರಂ

ಸಂಸ್ಕೃತ ಕನ್ನಡಗಳೆರಡನ್ನೂ ಬೆರೆಸಿ ಚಿತ್ತಾಕರ್ಷಕವಾದ

ಮಧುರ ಶೈಲಿಯಲ್ಲಿ, ಮನಸ್ಸು ಮಾಡಿದರೆ ಅಚ್ಚಗನ್ನಡದ ದೇಶಿ ಶೈಲಿಯಲ್ಲಿ ನಿರರ್ಗಳವಾಗಿ ಕಾವ್ಯ ರಚಿಸಬಲ್ಲನೆಂಬುದಕೆ ಒಂದೆರಡು ನಿದರ್ಶನಗಳನ್ನು ಕೊಡಬಹುದು.

ಮುತ್ತಿನ ತೋರಣಂ ಕನಕವೇದಿಕೆ ಪಚ್ಚೆಯ ಕುಟ್ಟಿಮಸ್ಥಳಂ
ಸುತ್ತಿಡಿದಿರ್ದ ಮಾಣಿಕದ ಲಂಬಣಮಾಲೆ ನವೀನ ಚೀನದಿಂ
ಬಿತ್ತರವೆತ್ತ ಮೇಲ್ಗುಡಿ ನಿಮಿರ್ಚಿದ ಬಜ್ಜರಗಂಬಮಿಂಬುಗೊಂ
ಡುತ್ತಮ ನೀಲಪುತ್ರಿಕೆ ವಿರಾಜಿತಮಾಯ್ತು ವಿವಾಹಗೇಹದೊಳ್

ಒಕ್ಕುದು ನೆತ್ತರ್ ಬಾಯಿಂ
ಮಿಕ್ಕಲರ್ದುಸಿರಿಡುವ ಮೂಗಿನೆರಡುಂ ಕಡೆಯಿಂ
ದಕ್ಕಟ ತಪ್ಪಾಯ್ತೆನುತುಂ
ಮುಕ್ಕಣ್ಣಂ ಮುಳುಗಿ ಮನದೆ ಮಿಡಿಮಿಡಿಗೊಂಡಂ

ಕನ್ನಡನಾಡಿನಲ್ಲಿ ಬಹುಜನರ ಗೌರವಾದರಗಳಿಗೆ ಭಾಜನವಾಗಿರುವ ಕೆಲವೇ ಕೆಲವು ಗ್ರಂಥಗಳಲ್ಲಿ ರಾಜಶೇಖರವಿಳಾಸವೊಂದು. ಅತಿಶಯ ವರ್ಣನೆಯ ವೈಪರೀತ್ಯವಿಲ್ಲದೆ, ದೇಶಿ ಮಾರ್ಗ ಶೈಲಿಗಳ ಅಪೂರ್ವ ಸಾಮರಸ್ಯದಿಂದ ಕೂಡಿದ ವೃಷಭೇಂದ್ರವಿಜಯ ಕೆಲವಂಶಗಳಲ್ಲಿ ರಾಜಶೇಖರವಿಳಾಸವನ್ನು ಮೀರಿಸುವಂತಿದ್ದರೂ, ಅದರಷ್ಟು ಜನಪ್ರಿಯವಾಗಲಿಲ್ಲ. ಅದು ಪುರಾಣ ಪರಂಪರೆಗೆ ಸೇರಿದುದೇ ಕಾರಣವಿರಬಹುದು. ಶೃಂಗಾರರಸ ಪ್ರಧಾನವಾದ ರಾಜಶೇಖರವಿಳಾಸದ ಕಥೆ ಅಂತಿಮಘಟ್ಟ ಸನ್ನಿಹಿತವಾಗುವವರೆಗೂ ಭೂಸ್ಪರ್ಶಿಯಾಗಿಯೆ, ಮಾನವತೆಯ ಅಂಚಿನಲ್ಲಿಯೆ ನಡೆಯುತ್ತದೆ; ಪಂಚಾಕ್ಷರೀ ಮಹಿಮೆಯ ಪ್ರಕಾಶ ಕಾವ್ಯದ ಗುರಿಯಾದರೂ ಅವಾಸ್ತವ ಘಟನೆಗಳ ಉಲ್ಲೇಖ ಅತಿಯಾಗಿಲ್ಲ. ಅಲ್ಲಿ ಬರುವ ಪಾತ್ರಗಳನ್ನು ನೋಡಿದರೆ ಕವಿ ನಯವಿನಯ ಸಂಪನ್ನನಾದ

ಸೌಜನ್ಯಮೂರ್ತಿಯೆಂದು ಗೊತ್ತಾಗುತ್ತದೆ. ಪ್ರಭು–ಮಂತ್ರಿ, ಪತಿ- ಸತಿ, ಗೆಳೆಯ–ಗೆಳೆಯ, ಗುರು–ಶಿಷ್ಯ, ರಾಜ–ಪ್ರಜೆ, ಯಾವ ಸಂಬಂಧವನ್ನು ನೋಡಿದರೂ ಅಲ್ಲಿ ಒಂದು ಉತ್ತಮ ಸಂಸ್ಕೃತಿ ವ್ಯಕ್ತವಾಗುತ್ತದೆ. ಪರಮತವನ್ನು ಅಸಹ್ಯವಾಗಿ ನಿಂದಿಸುವ ದುಷ್ಪ್ರವೃತ್ತಿ ಕವಿಯಲ್ಲಿಲ್ಲ. ಬಿಜ್ಜಳನ ಪಾತ್ರ ರಚನೆಯಲ್ಲಿಯೂ ಘನತೆ ಗಾಂಭೀರ್ಯಗಳ ಸೀಮೆಯನ್ನು ಮೀರಿಲ್ಲ. ಇದನ್ನೆಲ್ಲ ನೋಡಿದರೆ ಆತನದು ಸುಸಂಸ್ಕೃತವಾದ ಜೀವನ ಎಂದು ಕಾಣುತ್ತದೆ. ಈ ಎಲ್ಲ ಕಾರಣಗಳಿಂದ ರಾಜಶೇಖರ ವಿಳಾಸ ಜನಪ್ರಿಯ ಕಾವ್ಯವಾಗಿ, ಕವಿ ಕನ್ನಡಿಗರ ಹೃನ್ಮಂದಿರದಲ್ಲಿ ಶಾಶ್ವತವಾಗಿ ನೆಲಸುವಂತಾಯಿತು ; ಹದಿನೇಳನೆಯ ಶತಮಾನದ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆಯುವಂತಾಯಿತು. ಸಮಕಾಲೀನ ಪಂಡಿತರ ಮಾತ್ರವಲ್ಲ, ಸರ್ವಕಾಲದ ವಿದ್ವಾಂಸರ ಆದರಕ್ಕೆ ಪಾತ್ರನಾಗುವಂತಾಯಿತು.

ಜಿಹ್ವಾಂತರ್ನಟದಂಬುಜಾಸನ ವಧೂ ಪಾದ ಪ್ರವಾಳ ಸ್ಫುರನ್
ಮಂಜೀರದ್ವಯ ಮಂಜುನಾದ ವಿಭವ ಶ್ರೀಗರ್ವಸರ್ವಂಕಷಾಃ
ಜೀಯಾಸುರ್ಭವತಃ ಷಡಕ್ಷರ ವಿಭೋಃ ಕುಂದಾರವಿಂದಾವಲೀ
ಮಂದಾರ ದ್ರುಮಮಂಜರೀ ಮಧುಝರೀ
ಮಾಧುರ್ಯಧುರ್ಯಾಗಿರಃ

WO 226—MUMP—3000—25-4-1959

೧೬. ಸಾರಜನಕದ ಮಹತ್ವ—ಎಚ್. ಸುಬ್ಬಾಜೋಯಿಸ್
೧೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೧೮. ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ
೧೯. ಸರ್ವಜ್ಞ ಕವಿ—ಎ. ಆರ್. ಕೃಷ್ಣಶಾಸ್ತ್ರೀ
೨೦. ರಕ್ತ—ಡಿ. ಶಾಮಣ್ಣ
೨೧. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೨೨. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೨೩. ಗಣಿತಶಾಸ್ತ್ರದ ಸ್ವರೂಪ
—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
೨೪. ಋಗ್ವೇದ—ಎಂ. ಎ. ಕೃಷ್ಣಸ್ವಾಮಿ
೨೫. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೨೬. ಆಳ್ವಾರುಗಳು—ಎಂ. ಯಾಮುನಾಚಾರ್ಯ
೨೭. ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರು
—ವಿ. ರಾಘವೇಂದ್ರರಾವ್
೨೮. ಸುಭಾಷಿತ ಸಂಗ್ರಹಗಳು—ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರೀ
೨೯. ಮಕ್ಕಳ ಭಾವಜೀವನ—ಡಾ॥ ಬಿ. ಕುಪ್ಪುಸ್ವಾಮಿನಾಯಿಡು
೩೦. ಸಹಕಾರ—ಎಸ್. ಗೋಪಾಲಸ್ವಾಮಿ
೩೧. ನಯಸೇನ—ಜಿ. ವೆಂಕಟಸುಬ್ಬಯ್ಯ
೩೨. ಕೌಟಿಲ್ಯ—ಡಾ॥ ಎಂ. ವಿ. ಕೃಷ್ಣರಾವ್
೩೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೩೪. ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾವ್
೩೫. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೩೬. ರುಚಿ—ಎಸ್. ವಿ. ರಂಗಣ್ಣ
೩೭. ಕೀಟಗಳು—ಡಿ. ಎಸ್. ವೀರಯ್ಯ
೩೮. ಅಲೆಗಳು—ಕೆ. ಶೇಷಾದ್ರಿ ಅಯ್ಯಂಗಾರ್
೩೯. ಮುದ್ರಣ—ಟಿ. ಎಸ್. ಶಾಮರಾವ್
೪೦. ಐವರು ಭೌತ ವೈಜ್ಞಾನಿಕರು—ಬಿ. ಎ. ಕೃಷ್ಣಸ್ವಾಮಿರಾವ್
೪೧. ಕೃತಕರೇಷ್ಮೆ—ಎಂ. ಷಡಕ್ಷರಸ್ವಾಮಿ
೪೨. ಚೀನರ ಇತಿಹಾಸ ಮತ್ತು ನಾಗರಿಕತೆ
—ಎಸ್. ವೆಂಕಟದೇಶಿಕಾಚಾರ್

---

* ಈ ಪುಸ್ತಕ ಅಚ್ಚಿನಲ್ಲಿದೆ